## ಅರ್ಪಣೆ

### ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ

# ನಾನು — ನೀನು

ಮುಟ್ಟಿ ನೋಡುವೆನು ಕಾಂಚನಗಂಗೆ, ಎಂದೊಮ್ಮೆ
ಹೂಡುವದು ಗಾಳಿದೇರಿನಲಿ ಲಗ್ಗೆಯ; ಚಂದ್ರ-
ಲೋಕವನು ಸೇರಬೇಕೆಂದು ಜ್ಯೋತಿಃಸಾಂದ್ರ
ಆಕಾಶಬಾಣಗಳನೇರಿ ಬಯಲಲಿ ಚಿಮ್ಮಿ
ಸುಗ್ಗುವುದು! ದುರ್ಬೀನುಗಳ ಚುಚಿ ನಕ್ಷತ್ರ
ಚಕ್ರಪಸರವ ಕಣ್ಣು ತಾಗೆ ಕಾಣುವೆನೆಂದು
ನನ್ನ ಜೀವನ ನಯನ—ತೆರೆ ತಕ್ಕ ಬಿದ್ದಂತೆ
ಸಾಗರಕೆ ತುತ್ತಲಿದೆ ಆ ವಿಶಾಲ ಕ್ಷೇತ್ರ!

. . . . . . . .

ನಿನ್ನ ದರ್ಶನ ಪೂರ್ಣ; ಕೂಸು ಕಣ್ದೆರೆದಂತೆ
ಮೊಗ್ಗೆಯೆಲರಿಗೆ ಅಲರಿದಂತೆ, ಚಿಪ್ಪಿನ
ಹನಿಯೆ ಮುತ್ತಾದಂತೆ, ಬಸಿ
ನೀರೆ ಪಿಂಡಾಕಾರ ಬೆ
ಚಣಚಣಕು
ನನಗೆ

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಒಲವೇ ನಮ್ಮ ಬದುಕು

**(ಒಲವಿನ ಗೀತೆಗಳ ಸಂಗ್ರಹ)**

**ಅಂಬಿಕಾತನಯದತ್ತ**



ರೇಖಾಚಿತ್ರ :

ಕೆ. ಕೆ. ಹೆಬ್ಬಾರ್

**ವಿಶ್ವ ಕನ್ನಡ ಸಮ್ಮೇಳನ**
**14-3 ಎ, ನೃಪತುಂಗ ರಸ್ತೆ**
**ಬೆಂಗಳೂರು-560 002**

Vishwa Kannada Sahitya Male

OLAVE NAMMA BADUKU — (A Collection of Love Poems) by Ambikatanaya Datta (Dr. D. R. Bendre), Sadhanakeri, Dharwad. Illustrations by K. K. Hebbar, Bombay.

Published by K. Jayacharya, K.A.S., Additional Director, Directorate of Kannada & Culture (Vishwa Kannada Sammelana), 14/3 A' Nrupathunga Road, Bangalore-560 002.







Third Edition : 1983. 5,000 Copies



ಬೆಲೆ : ಎರಡೂವರೆ ರೂಪಾಯಿಗಳು

ಅಶ್ವಥ್ ಪ್ರಿಂಟರ್ಸ್
೪೪೩, ೪೪ನೇ ಅಡ್ಡರಸ್ತೆ, ಒಂದನೇ ಮುಖ್ಯರಸ್ತೆ
೮ನೇ ಹಂತ, ಜಯನಗರ ಬೆಂಗಳೂರು ೫೬೦೦೮೨

ಆರ್. ಗುಂಡೂರಾವ್
ಮುಖ್ಯಮಂತ್ರಿ

ವಿಧಾನಸೌಧ
ಬೆಂಗಳೂರು

ದಿನಾಂಕ: ೧೮-೯-೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆ ಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ಆರ್. ಗುಂಡೂರಾವ್

ಮುಖ್ಯಮಂತ್ರಿ

# ಪರಿವಿಡಿ

## ಭಾಗ ಎರಡು : ವಿರಹ ಗೀತೆಗಳು



## ಭಾಗ ಮೂರು : ಕೌಟುಂಬಿಕ ಗೀತಗಳು

ಭಾಗ ಎಂಟು : ಸ್ನೇಹಗೀತಗಳು



ಭಾಗ ಒಂಬತ್ತು : ಪ್ರೇಮತತ್ತ್ವದರ್ಶನ

# ಪೀಠಿಕೆ-೧

ಒಲವು – ಪ್ರೀತಿ ಜೀವನದ ಬಹು ಮುಖ್ಯವಾದ ಒಂದು ಸ್ಥಾಯಿಭಾವ. ಒಲವಿನ ಮುಖ ಹಲವು. ಕೆಲವರ ಜೀವನದಲ್ಲಿ ಕೆಲವು ಮುಖಗಳ ಆವಿಷ್ಕಾರ. ಎಲ್ಲ ಮುಖಗಳನ್ನು ಕಂಡವರು ಪ್ರಾಯಶಃ ಯಾರೂ ಇಲ್ಲ. ಈ ಒಲವನ್ನು – ಪ್ರೀತಿಯನ್ನು ಹೆಣ್ಣು-ಗಂಡಿನ ಹರೆಯದ ಸೆಳೆತಕ್ಕೆ ಮಾತ್ರ ಸೀಮಿತಗೊಳಿಸಿ ಭ್ರಮಿಸಿಕೊಂಡವರೆ ಬಹಳ ಮಂದಿ.

ಮುಖ್ಯವಾಗಿ ಪ್ರೀತಿಗೆ ಮೂರು ಮಜಲುಗಳುಂಟು. ಹಿರಿಯರ ಬಗೆಗಿನ ಪ್ರೀತಿ, ಕಿರಿಯರ ಮೇಲಣ ಪ್ರೀತಿ ಮತ್ತು ಸಮಾನರಲ್ಲಿ ಪರಸ್ಪರ ಪ್ರೀತಿ. ನಮ್ಮಿಂದ ಎತ್ತರದಲ್ಲಿರುವ ವಸ್ತುವನ್ನು ಕಂಡು, ಆ ಎತ್ತರಕ್ಕೆ ಗೌರವದ ಗರಿ ಮೂಡಿ ಪ್ರೀತಿಸುತ್ತೇವೆ. ನಾವು ಗುರು ಹಿರಿಯರನ್ನು, ಅನುಭಾವಿಗಳು ಭಗವಂತನನ್ನು ಪ್ರೀತಿಸುವ ಬಗೆ ಇದು : ಪ್ರೀತಿಯ ಈ ಮೊದಲ ಮುಖವನ್ನೆ ಭಕ್ತಿ ಎಂದು ಕರೆಯುತ್ತಾರೆ.

ನಿಮ್ಮಿಂದ ತಗ್ಗಿನಲ್ಲಿರುವ ವಸ್ತುವನ್ನು ಆ ತಗ್ಗಿನ ದಾರಿಗುಂಟ ಮಮತೆಯಿಂದ ಇಳಿದು ನಾವು ಪ್ರೀತಿಸುತ್ತೇವೆ. ತಂದೆ-ತಾಯಿ ತಮ್ಮ ಮಕ್ಕಳನ್ನು ಪ್ರೀತಿಸುವ ಬಗೆ ಇದು : ಪ್ರೀತಿಯ ಈ ಎರಡನೆಯ ಮುಖವನ್ನೆ ವಾತ್ಸಲ್ಯ ಎಂದು ಕರೆಯುತ್ತಾರೆ.

ಇಬ್ಬರೂ ಒಂದೇ ನೆಲೆಯಲ್ಲಿ ನಿಂತು, ಒಬ್ಬರನ್ನೊಬ್ಬರು ಪೂರ್ಣವಾಗಿ ಅರಿತುಕೊಂಡು ಪರಸ್ಪರ ಪ್ರೀತಿಸುತ್ತೇವೆ. ಗೆಳೆತನದ ನಿರ್ವ್ಯಾಜ ಪ್ರೀತಿ ಇದು : ಇದನ್ನೆ ಸ್ನೇಹ ಎಂದು ಕರೆದರು. ಈ ಸ್ನೇಹದ ಎರಡು ಘಟಕಗಳಲ್ಲಿ ಒಂದು ಹೆಣ್ಣು ಇನ್ನೊಂದು ಗಂಡು ಆದಾಗ, ಬಂಗಾರಕ್ಕೆ ಕೆಂಪು ಮೂಡಿದಂತೆ, ಸ್ನೇಹಕ್ಕೆ ಹೊಸ ಸಿಂಗಾರ. ಸ್ನೇಹ ಶೃಂಗಾರಗೊಳ್ಳುತ್ತದೆ; ಶೃಂಗಾರವೆ ಆಗಿಬಿಡುತ್ತದೆ. ಹೀಗೆ ಒಮ್ಮೆ ವಾತ್ಸಲ್ಯವಾಗಿ, ಒಮ್ಮೆ ಸ್ನೇಹವಾಗಿ, ಒಮ್ಮೆ ಭಕ್ತಿಯಾಗಿ, ಈ ಪ್ರೀತಿ ಮುಪ್ಪುರಿಗೊಂಡು ಜೀವನವನ್ನು ನಿಯಂತ್ರಿಸುತ್ತದೆ. ಶೃಂಗಾರ ಕೇಂದ್ರಬಿಂದು, ಅದರ ಆಚೆಯ ಮಗ್ಗುಲು ವಾತ್ಸಲ್ಯ, ಈಚೆಯ ಮಗ್ಗುಲು ಭಕ್ತಿ.

ಭಕ್ತಿಯಲ್ಲಿ ಗೌರವದ ಭಾರ. ವಾತ್ಸಲ್ಯದಲ್ಲಿ ಅನುಕಂಪೆಯ ಕಾಪು. ಸ್ನೇಹವೊಂದೇ ನಿರುಪಾಧಿಕ. ಇದೂ ಭಿನ್ನಲಿಂಗಿಗಳ ಸ್ನೇಹವಾದಾಗ ಒಂದು ಅಜ್ಞೇಯವಾದ ಹೊಸತನದ ಆಕರ್ಷಣೆ ಬೆರೆತುಕೊಳ್ಳುತ್ತದೆ. ಆದಕೆಂದೆ ಪ್ರಾಚೀನರು ಶೃಂಗಾರವೊಂದನ್ನೆ ರಸಗಳಲ್ಲಿ ಪರಿಗಣಿಸಿದರು. ಭಕ್ತಿರಸ, ವಾತ್ಸಲ್ಯರಸ ಇದಕ್ಕೆ ಪೂರಕವಾಗಿ ಆಚೆ-ಈಚೆ ಇರತಕ್ಕಂಥ ಘಟಕಗಳು. ಇಂಥ ಸ್ನೇಹದ ಪರಾಕಾಷ್ಠೆಯೆ ಶಾಂತಿ. ಇದು ಪ್ರಾಚೀನರ ರಸ ಮೀಮಾಂಸೆಯ ರಹಸ್ಯ.

ಸ್ನೇಹ ಜಲಾಶಯದಲ್ಲಿ ತುಂಬಿ ನಿಂತ ತಿಳಿನೀರು, ಒಡ್ಡು ತೆಗೆದರೆ ಇದು ಇಳಿಜಾರಿನಲ್ಲಿ ವಾತ್ಸಲ್ಯವಾಗಿ ಕೆಳಕ್ಕೆ ಹರಿಯುತ್ತದೆ. ಬಿಸಿಲಿನ ಬಿಸಿ ಬಿದ್ದರೆ ಭಕ್ತಿಯ ಮೋಡವಾಗಿ ಮೇಲೇರುತ್ತದೆ. ಎಲ್ಲದರ ಕೊನೆಯ ಗುರಿ ಒಂದೆ. ಒಂದು ಇನ್ನೊಂದಕ್ಕೆ ಪೂರಕ. ಕೆರೆಯ ನೀರೆ ಮೋಡವಾಗಿ ಮೇಲೇರುತ್ತದೆ; ಮೇಲೇರಿದ ನೀರೇ ಸುರಿದು ಕೆರೆ-ನದಿ ತುಂಬಿ ಕೊಂಡು ಏರಿನಿಂದ ತಗ್ಗಿಗೆ ಇಳಿದು ಬರುತ್ತದೆ. ಇಳಿಜಾರಿನಲ್ಲಿ ಇಳಿದು ಹರಿಯದೆ, ಹವೆ ಯಾಗಿ ಹಗುರವಾಗಿ ಮೇಲೇರದೆ ಮಡುಕಟ್ಟಿ ನಿಂತ ನೀರು ನಾರುತ್ತದೆ. ಈ ಏರು ತಗ್ಗು ಗಳನ್ನು ಕಾಣದ ಶೃಂಗಾರವೂ ಅಷ್ಟೆ. ಮಾಡು ಹಾರಿದ, ಪಂಚಾಂಗ ಜರಿದ ಕಟ್ಟಡ ವಾಸಕ್ಕೆ ಯೋಗ್ಯವಲ್ಲ; ನಾಶಕ್ಕೆ ಯೋಗ್ಯ.

ಪ್ರೀತಿಯ ವ್ಯಾಪ್ತಿ ಇಲ್ಲಿಗೆ ಮುಗಿಯಲಿಲ್ಲ. ಅದು ಭೂಮಿಯಿಂದ ಭೂಮದ ತನಕ ಹೆಣೆದ ನೇಹದ ಬಂಧ ಮಾತ್ರವಲ್ಲ; ಭೂಮಿಯ ಭಾವಪ್ರಪಂಚ ವಿಶ್ವತೋಮುಖಿಗಳಲ್ಲೂ ಅದರದೇ ಬಿತ್ತರದ ಚೆಲುವು.

ಪ್ರೀತಿಯಿಂದಲೆ ಹಾಸ್ಯ ಹುಟ್ಟಿಕೊಳ್ಳುತ್ತದೆ. ಪ್ರೀತಿಯಿಲ್ಲದಲ್ಲಿ ಎಂಥ ಪರಿಹಾಸ ? 'ಪರಿಹಾಸವಿಜಲ್ಪಿತಂ ಸಖೆ' ಎಂದ ಕಾಳಿದಾಸ. ಸಖ್ಯವಿಲ್ಲದಲ್ಲಿ ಪರಿಹಾಸವಿಜಲ್ಪಿತವೂ ಇಲ್ಲ. ನಾವು ಪ್ರೀತಿಸಿದ ವಸ್ತು ನಮ್ಮ ಇಷ್ಟಕ್ಕೆ ವಿರುದ್ಧವಾಗಿ ನಡೆದುಕೊಂಡಾಗ ಕೋಪಿಸಿಕೊಳ್ಳು ತ್ತೇವೆ. ಪ್ರೀತಿ ಇಲ್ಲದಲ್ಲಿ ಕೋಪವೂ ಇಲ್ಲ. 'ಕೋಪ ಪ್ರೀತಿಯ ಮರಿ, ಪ್ರೀತಿ ಕೋಪದ ಗುರಿ.' ನಾವು ಪ್ರೀತಿಸಿದ ಸೊತ್ತು ದಕ್ಕದಾಗ ಕರುಣೆಗೆ ಬಲಿಯಾಗುತ್ತೇವೆ. ಒಮ್ಮೊಮ್ಮೆ ಈ ಹೋರಾಟದಲ್ಲಿ ಗೆದ್ದು ವೀರರಾಗುತ್ತೇವೆ. ಗೆದ್ದೇ ತೀರಬೇಕೆಂಬ ಛಲದಲ್ಲಿ ರೌದ್ರಾವತಾರ ತಾಳುತ್ತೇವೆ. ಸೋತಾಗ ಇಡೀ ಜಗತ್ತೆ ಭಯಾನಕವಾಗಿ, ಬೀಭತ್ಸವಾಗಿ ಕಾಣಿಸುತ್ತದೆ. ಸ್ತ್ರೀಮೂಲ, ನದಿಮೂಲ, ಋಷಿಮೂಲಕ್ಕಿಂತಲು ಗಹನವಾದ ಅದರ ಮೂಲ ಶೋಧನೆ ಎಂಥ ಅದ್ಭುತ! ಆದರೆ ಮೂಲದ ಅರಿವಾದಾಗ ಎಂಥ ಸಾರ್ಥಕತೆಯ ಶಾಂತಿ !

ಹೀಗೆ ಇಡಿಯ ಬದುಕು ಪ್ರೀತಿಯ ದಾರದಲ್ಲಿ ಹೆಣೆದುಕೊಂಡಿದೆ. ಬಸಿರಿನಿಂದ ಹೊರಕ್ಕೆ ಬಿದ್ದ ಕ್ಷಣದಿಂದ ಉಸಿರು ನಿಲ್ಲುವ ತನಕ ಮನುಷ್ಯ ಜೀವನವನ್ನು ನಿಯಂತ್ರಿಸುವ ಏಕಸೂತ್ರ ; ಪ್ರೀತಿ. 'ಏಕೋ ರಸಃ ಕರುಣ ಏವ' ಎಂದ ಭವಭೂತಿಯೂ ಇದಕ್ಕಿಂತ ತೀರ ಭಿನ್ನವಾದ ಮಾತನ್ನೇನೂ ಹೇಳಲಿಲ್ಲ. ಒಂದೇ ಮಾತನ್ನು ಬೇರೊಂದು ನಿಟ್ಟಿನಿಂದ, ಒಂದೇ ಸತ್ಯವನ್ನು ಇನ್ನೊಂದು ಮಗ್ಗುಲಿನಿಂದ ಕಂಡು ಹೇಳಿದ್ದಾನೆ – ಅಷ್ಟೆ. ನಾವು ಅದನ್ನು 'ಏಕೋ ರಸಃ ಪ್ರಣಯ ಏವ' – ಎಂದು ಪಾಠಾಂತರಿಸಿ ಓದಿದರೂ ಕವಿಯ ಒಟ್ಟು ಭಾವದಲ್ಲಿ ಯಾವ ಬದಲಾವಣೆಯೂ ಆಗದು.

'ಒಲವೆ ನಮ್ಮ ಬದುಕು' ಎಂಬ ಅಂಬಿಕಾತನಯದತ್ತರ ಕಾವ್ಯಸೂತ್ರ ಈ ಎಲ್ಲ ಭಾವಗಳನ್ನು ಸಮಷ್ಟಿಯಾಗಿ ನಮ್ಮ ಮುಂದಿರಿಸುತ್ತದೆ. ಈ ದೃಷ್ಟಿಯಿಂದ ಸಂಕಲನ ವನ್ನು ಕಂಡಾಗ ಇಲ್ಲಿಯ ಆಯ್ಕೆಯ ಔಚಿತ್ಯ ಸ್ಫುಟವಾಗುತ್ತದೆ. ಅಂಬಿಕಾತನಯದತ್ತರ

ಮಿಸ್ಟಿಕ್ ಕವನಗಳು ಶ್ರೇಷ್ಠ ಪ್ರಣಯ ಕಾವ್ಯ. ಹೀಗೆ ನೋಡಿದರೆ ಪ್ರಣಯ ಕಾವ್ಯ – ಪ್ರಣಯೇತರ ಕಾವ್ಯ ಏಂಬ ವಿಭಾಗವೆ ಅರ್ಥಶೂನ್ಯವಾಗುತ್ತದೆ. ಏಕೆಂದರೆ ಈ ಪ್ರಣಯ ಕಾವ್ಯದ ವಿಭಾಗದಿಂದ ಹೊರತುಪಡಿಸಬೇಕಾದ ಕವಿತೆಯೆ ಉಳಿದಿರುವುದಿಲ್ಲ. ಅದಕ್ಕಾಗಿ ಈ ಪ್ರೀತಿಯ ಹರವು–ಎತ್ತರಗಳಿಗೆ ಎಂದು ಸೀಮಾರೇಷೆ ಎಳೆದು ಆ ಲಕ್ಷ್ಮಣರೇಖೆಯ ಒಳಗೆಯೆ ನಮ್ಮನ್ನು ಬಂಧಿಸಿಕೊಂಡು ನಾವು ಕವಿತೆಗಳನ್ನು ಆಯುವ ಕೆಲಸ ಮಾಡ ಬೇಕಾಯಿತು.

ಇಲ್ಲಿ ಇನ್ನೊಂದು ಮಾತನ್ನು ಸ್ಪಷ್ಟಪಡಿಸಬೇಕು : ಏಕಮುಖವಾದ ದರ್ಶನದಿಂದ ಈ ಕವಿತೆಗಳನ್ನು ಅರ್ಥೈಸ ಹೊರಡುವುದು ವ್ಯರ್ಥ ಪ್ರಯತ್ನ. ಅಂಬಿಕಾತನಯದತ್ತರ ಪ್ರಣಯ ಗೀತೆಗಳಲ್ಲೂ ಅನುಭಾವ ಉಂಟು ; ಅನುಭಾವ ಗೀತಗಳಲ್ಲೂ ಪ್ರಣಯ ಉಂಟು. ಪ್ರಣಯ ಅನುಭಾವದ್ದೇ ಚಿಗುರು ;. ಅನುಭಾವ ಪ್ರಣಯದ್ದೇ ಹೊಗರು ಎನ್ನುವ ಮಾತು ಸ್ಫುಟವಾಗುವ ತನಕ ನಮಗೆ ಯಾವ ಒಳ್ಳೆಯ ಕಾವ್ಯವೂ ಅರ್ಥ ಆಗುವುದಿಲ್ಲ. ನಾನು–ನೀನು ಆನಾಗಿ ತಾನಾಗಿ ತಾನೇ ತಾನಾಗಿ ಹೊಮ್ಮುವ ಸಹಜ ಪ್ರವಾಹ ಆಗಬೇಕು. ಅದಕ್ಕಾಗಿ ಮಾಗಬೇಕು. ಮಾಗುವಂಥ ಯೋಗ ಬೇಕು. ವಿಯೋಗದಿಂದ ಸುಯೋಗ ದೆಡೆಗೆ ಸಾಗಬೇಕು, ಸಾಗುವಂಥ ದಾರಿ ಗೊತ್ತಿರಬೇಕು. ಕವಿ-ಸಹೃದಯರ ಸಹಯೋಗ ಆಗಬೇಕು. ಇಬ್ಬರೂ ಸೇರಿ 'ಸಹವೀರ್ಯಂ ಕರವಾವಹೈ' ಎನ್ನಬೇಕು. ಒಬ್ಬ ಏರಿಗೆ, ಒಬ್ಬ ನೀರಿಗೆ ಎಳೆಯಬಾರದು. ಅದಕ್ಕಾಗಿ ಬಲ್ಲವರ ಮುಂದೆ ಬಾಗಬೇಕು. ಬೀಗಿದವ ಬಾಗಿಲಿನ ಬೀಗ ತೆಗೆಯಲಾರ. ಗರ್ಭಗುಡಿಯ ಬಿಂಬಮೂರ್ತಿಯನ್ನು ಕಾಣಲಾರ. ಬೇಲಿಯ ಹೊರಗೆ ವ್ಯರ್ಥ ಪ್ರದಕ್ಷಿಣೆ.

ಸಿಪ್ಪೆ–ಚಿಪ್ಪು ಒಳಗಿನ ರಸಕ್ಕೆ ರಕ್ಷೆ ಹೌದು. ಆದರೆ ಚಿಪ್ಪು ನೆಕ್ಕಿ, ಸಿಪ್ಪೆ ಜಗಿದು ರಸ ಹೀರಲಾಗದು, ಈ ಪ್ರಜ್ಞೆ ಕವಿಗೆ ಮಾತ್ರ ಇದ್ದರೆ ಸಾಲದು; ಸಹೃದಯನಿಗೂ ಇರಬೇಕು. ಏಕೆಂದರೆ ಕಾವ್ಯ ಕವಿಯ ಸೊತ್ತು ಮಾತ್ರವಲ್ಲ. ಕವಿ ಕಾವ್ಯಕನ್ನೆಯನ್ನು ಸಹೃದಯನಿಗೆ ಧಾರೆಯೆರೆದುಕೊಟ್ಟಾಗ, ಕನ್ಯಾಪರಿಗ್ರಹದ ಮುನ್ನ ಸಹೃದಯ 'ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ' ಎಂದು ಪ್ರತಿಜ್ಞೆ ಮಾಡುವ ಅವಶ್ಯವಿದೆ.

ಕವಿಶಬ್ದವನ್ನು ಸೃಷ್ಟಿಸುತ್ತಾನೆ; ಸಹೃದಯ ಅದಕ್ಕೆ ಅರ್ಥ ಮೂಡಿಸುತ್ತಾನೆ. 'ಸರಸ್ವತ್ಯಾಸ್ತತ್ವಂ ಕವಿಸಹೃದಯಾಖ್ಯಂ ವಿಜಯತೇ'. ಹೀಗೆ ಶಬ್ದಾರ್ಥಗಳ ದಾಂಪತ್ಯದ ಮಂಗಲಸೂತ್ರವನ್ನು ಕವಿ–ಸಹೃದಯರು ಸೇರಿಯೆ ಪೋಣಿಸಬೇಕಾಗುತ್ತದೆ. ಕೊನೆಗೂ ಕಾವ್ಯದ ಮೌನದ ಚಿಪ್ಪನ್ನು ಒಡೆಯುವ ಕೆಲಸ ಹೃದಯ ಚತುರ್ಮುಖನಿಂದಲೇ ಆಗ ಬೇಕು. ಹೀಗೆ ಶಬ್ದ-ಅರ್ಥ-ಕವಿ-ಸಹೃದಯ ಈ ನಾಕು ತಂತಿಗಳ ಮೇಲೆ ಸಾಹಿತ್ಯದ ಪದನ್ಯಾಸ ನಡೆದಿದೆ. ಈ ಚತುಷ್ಪದಾಗಾಯತ್ರಿಯ ಆವಿಷ್ಕಾರಕ್ಕೆ ವಿಶ್ವಾಮಿತ್ರನ ತಪಸ್ಸು ಬೇಕು; ಫಲವೂ ಬೇಕು.

'ಈ ಜಗ, ಅಪ್ಪಾ–ಅಮ್ಮನ ಮಗ
ಅಮ್ಮನೊಳಗ ಅಪ್ಪನ ಮೊಗ
ಅಪ್ಪನ ಕತ್ತಿಗೆ ಅಮ್ಮನ ನೊಗ' (ನಾಕು ತಂತಿ)

ಕಾಳಿದಾಸ 'ವಾಗರ್ಥಾವಿವ ಸಂಪೃಕ್ತೌ' ಎಂದ ; 'ಜಗತಃ ಪಿತರೌ' ಎಂದ. ಇವರ ಮುಂದಕ್ಕೆ 'ನಾ ಅವರ ಕಂದ' (ನಾಕು ತಂತಿ) ಎಂಬ ಭಾವ ಬಂದಾಗ ಶೃಂಗಾರ-ವಾತ್ಸಲ್ಯ-ಭಕ್ತಿಗಳ ಈ ತ್ರಿವೇಣಿಸಂಗಮದಲ್ಲಿ ಪುಣ್ಯಕಾವ್ಯ ಮೂಡಿಕೊಳ್ಳುತ್ತದೆ. ಉಳಿದದ್ದೆಲ್ಲ ಪಣ್ಯ ಕಾವ್ಯ.

ಇಲ್ಲಿಯ ಒಂದೊಂದೇ ಪದ್ಯವನ್ನು ಆಯ್ದುಕೊಂಡು ಈ ಮಾತನ್ನು ವಿಶ್ಲೇಷಿಸುತ್ತ ಹೊರಟರೆ ಇದೊಂದು ಮಹಾಪ್ರಬಂಧವೆ ಆದೀತು ಎನ್ನುವ ಭಯ ನನಗುಂಟು. ಬೇರೆ ಸಂದರ್ಭಗಳಲ್ಲಿ ನಾನು ಅಂಥ ಕೆಲಸವನ್ನು ಮಾಡಿಯೂ ಇದ್ದೇನೆ. ಈ ಗ್ರಂಥದ ಪೀಠಿಕೆಯಾಗಿ ಇಷ್ಟು ಸಾಕು. ಈ ಮಾತಿನ ಹಿನ್ನೆಲೆಯಲ್ಲಿ ಅಂಬಿಕಾತನಯದತ್ತರ ಕಾವ್ಯಾಭ್ಯಾಸಕ್ಕೆ ಇಳಿದರೆ ಅವರ ಕಾವ್ಯಮಾರ್ಗವನ್ನು ಗುರುತಿಸುವುದು ಹೆಚ್ಚು ಸುಲಭವಾದೀತು ಎಂದು ನಾನು ನಂಬಿದ್ದೇನೆ. ಬೇಂದ್ರೆಯವರ ಮುಖದಿಂದ ಅಂಬಿಕಾತನಯದತ್ತರಂಥ ಅಪೂರ್ವ ಕವಿ ಕನ್ನಡಕ್ಕೆ ದೊರೆತದ್ದು ಈ ನೆಲದ ಪುಣ್ಯ. ಇದನ್ನು ಉಪಯೋಗಿಸಿಕೊಳ್ಳುವುದು, ಬಿಡುವುದು ನಮ್ಮ ಕೈಯಲ್ಲಿದೆ. ಆದರೆ ಅಂಗಳದಲ್ಲಿ ಹುದುಗಿದ್ದ ನಿಧಿಯನ್ನು ಅಲಕ್ಷಿಸಿ ಆಕಾಶ ನೋಡುತ್ತ ಆತ್ಮವಂಚಿತನಾಗಿ ಬದುಕುವುದು ಯಾರಿಗೂ ಭೂಷಣವಲ್ಲ. ಈ ದಿಸೆಯಲ್ಲಿ ಈ ಸಂಕಲನ ಒಂದು ಪುಟ್ಟ ಹೆಜ್ಜೆಯ ಪಥಕ್ರಮಣ.

–ಒನ್ನಂಜೆ ಗೋವಿಂದಾಚಾರ್ಯ

# ಪೀಠಿಕೆ -೨

ಪ್ರೇಮಗೀತೆಗಳನ್ನು ಹೆಚ್ಚಾಗಿ ಗಂಡು-ಹೆಣ್ಣಿನ ಸಂಬಂಧಗಳಿಗೆ ಸೀಮಿತಗೊಳಿಸುವುದು ನಮ್ಮ ಸಾಮಾಜಿಕ ಸಂಪ್ರದಾಯ. ಆದರೆ ಅಂಬಿಕಾತನಯದತ್ತರ ದೃಷ್ಟಿಯಲ್ಲಿ ಪ್ರೇಮವು ಹೊನ್ನು-ಹೆಣ್ಣು-ಮಣ್ಣು ಮುಂತಾದ ಪಾತ್ರಗಳ ಮೂಲಕ ಪ್ರಕಟವಾಗುವ ಬದುಕಿನ ಹಬ್ಬದಲ್ಲಿ ಪೂಜೆಗೊಳ್ಳುವ 'ಮೂಲಬಿಂಬ'. ಅದು 'ಬೆಳಕಿನ ರೀತಿ, ಆತ್ಮದ ನೀತಿ.' 'ಅನ್ನವೆ ಧರ್ಮದ ಮೂಲ, ಪ್ರೀತಿಯೇ ಮೋಕ್ಷಕ್ಕೆ ಬಲ.' ವಿಷಯ ಕಾಮನೆಗಳ ಜಾಲದಲ್ಲಿ ಪ್ರೀತಿಯ ಆಧಿಭೌತಿಕ ಮುಖವು ಪ್ರಕಟವಾಗುತ್ತದೆ. ಕಾವ್ಯ-ಕಾಮ ಮತ್ತು ಭಕ್ತಿ-ಕಾಮ ಪ್ರೇಮದ ಆಧ್ಯಾತ್ಮಿಕ, ಆಧಿದೈವಿಕ ಮುಖಗಳು (ನೋಡಿ : 'ಕನ್ನಡ ಮೇಘದೂತ'—ಪೀಠಿಕಾ ಭಾಗ.) ಹೀಗಾಗಿ ಬೇಂದ್ರೆಯವರ ಪ್ರೇಮಗೀತಗಳಲ್ಲಿ ಅವರ ಬಾಹ್ಯಜೀವನದ ಘಟನೆಗಳ ಜತೆಗೆ ಕಾವ್ಯಜೀವನ ಮತ್ತು ಭಕ್ತಿಜೀವನದ ಅನುಭವಗಳೂ ಅನುಭಾವಗಳೂ ಅನಿವಾರ್ಯವಾಗಿ ಹೆಣೆದುಕೊಳ್ಳುತ್ತವೆ. ಪ್ರೇಮಜೀವನವು ಶೃಂಗಾರರಸದ ವರ್ತುಲದಲ್ಲಿ ಇಂಗಿಹೋಗದೆ ಕೌಟುಂಬಿಕ ವಾತ್ಸಲ್ಯ, ಸಾಮಾಜಿಕ ಸ್ನೇಹ, ಮಾನವೀಯ ಕಾರುಣ್ಯವಾಗಿ ಪರಿಪಾಕಗೊಂಡು ಸಂಸಾರದ ಎಲ್ಲ ಸುಖ-ದುಃಖಗಳನ್ನು ದೈವಿಕ-ಭಕ್ತಿ-ಬಾಂಧವ್ಯದ ಪ್ರಸಾದವಾಗಿ ಸ್ವೀಕರಿಸಲು ಹವಣಿಸುತ್ತದೆ. ಇಂಥ ಪ್ರೇಮದರ್ಶನವ ವಿಶಾಲಭೂಮಿಕೆಯನ್ನು ಅನುಲಕ್ಷಿಸಿ, ಈ ಸಂಗ್ರಹವನ್ನು ಸಾಕಷ್ಟು ವಿಸ್ತಾರವಾಗಿ, ಒಂಬತ್ತು ವಿಭಾಗಗಳಲ್ಲಿ ವಿಂಗಡಿಸಿ, ಪ್ರಕಟಿಸಲಾಗಿದೆ. ಕೇವಲ ಭಕ್ತಿಗೀತೆಗಳೆಂದೋ ಅನುಭಾವಗೀತೆಗಳೆಂದೋ ಕರೆಯಬಹುದಾದ ಕವನಗಳನ್ನು ಇಲ್ಲಿ ಸೇರಿಸಿಕೊಂಡಿಲ್ಲ. ಓದುಗರ ಅನುಕೂಲತೆಗಾಗಿ ಕವನಗಳನ್ನು ಸ್ಥೂಲವಾಗಿ ವಿಂಗಡಿಸಿದ್ದೇವೆ. ವರ್ಗೀಕರಣ ದೆಸೆಯಿಂದ ಕವನಗಳಿಗೆ ಅಪಚಾರವಾಗಿದ್ದರೆ ಓದುಗರು ಮನ್ನಿಸಬೇಕು.

'ಕಾಮಕಸ್ತೂರಿ' ಎಂಬ ಕವನಸಂಕಲನದ ಕೊನೆಯ 'ಸಂಸಾರ' ಎಂಬ ಕವನದ ಜಾಡನ್ನು ಅನುಸರಿಸಿ ಈ ಸಂಗ್ರಹದ ಕವನಗಳನ್ನು ವಿಂಗಡಿಸಲಾಗಿದೆ. ಈ ಕವನದಲ್ಲಿ ಗಂಡು—ಹೆಣ್ಣಿನ ಪ್ರೇಮವನ್ನು ಐದು ಮಜಲುಗಳಲ್ಲಿ ಚಿತ್ರಿಸಲಾಗಿದೆ. ಪೌರಾಣಿಕ, ಕಾವ್ಯರಸಿಕ, ವ್ರತಿ, ಕೌಟುಂಬಿಕ, ಕನಸಿಗ—ಇವರು ಪ್ರೇಮಸಂಸಾರದ ಐದು ಮಜಲುಗಳ ಪ್ರತಿನಿಧಿಗಳು. ಪೌರಾಣಿಕನ ಶೃಂಗಾರಕ್ಕೆ ಸುಗ್ಗಿ ತಿಂಗಳಿನ, ಮಾವಿನ ಕಾಡಿನ, ಕೋಗಿಲೆಯ ಹಾಡಿನ ಆಲಂಬನ-ಉದ್ದೀಪನ ವಿಧಾನಗಳು ಬೇಕು. ಕಾವ್ಯರಸಿಕನ ಶೃಂಗಾರಕ್ಕೆ ಬಾಹ್ಯ ಪರಿಕರಗಳು ಬೇಕಾಗಿಲ್ಲ. ವಿರಹದ ಕುಲುಮೆಯಲ್ಲಿ ಕಾಯುವ ವ್ರತಿಗೆ ನೀರೆಯ ಸ್ಪರ್ಶ ಮಾತ್ರದಿಂದ ಒಲುಮೆ ಹರ್ಷದ ಚಿಲುಮೆಯಾಗಿ ನೀರಾಟವಾಡುತ್ತದೆ. ಕೌಟುಂಬಿಕನು ತನ್ನ ಬಳಗದ ಮುದ್ದು ಮಾತಿನ ಆನಂದದಲ್ಲಿ ಪ್ರೇಮದ ಸಾಫಲ್ಯವನ್ನು ಕಾಣುತ್ತಾನೆ. ಕನಸಿಗನಿಗೆ ಒಲವಿನ ಬದುಕಿನ ಬಾಹ್ಯದೃಶ್ಯಗಳೆಲ್ಲವೂ ತನ್ನ ಅಂತರಂಗದ ಬೆಳಕಿನ ಕಾಣ್ಕೆಯ ಕುರುಹುಗಳಾಗಿ ಹೊಳೆಯುತ್ತವೆ. ಇಷ್ಟೆಲ್ಲ ನಡೆದಿರುವುದು ರಾತ್ರಿಯಲ್ಲಿ. ತಂತಮ್ಮ ಮನೆಗಳಲ್ಲೇ, ತಂತಮ್ಮ ದೃಷ್ಟಿಕೋನಗಳ ಸೀಮೆಯಲ್ಲಿ ಸಿಗುವ ಪ್ರೇಮರಸದಲ್ಲಿ ತಲ್ಲೀನರಾಗಿರುವ ಈ ಪ್ರೇಮಿಗಳ ಸ್ವಯಂ ತೃಪ್ತಿಯ ಉದ್ಗಾರಗಳನ್ನು ಕೇಳಿ ರಾತ್ರಿದೇವತೆ ಕಣ್ಣುಮಿಟುಕಿ

ಸುತ್ತಾಳೆ. ಮಾನವನ ಅಭೀಪ್ಸಿತವಾದ ಶುದ್ಧಪ್ರೇಮದ ಬೆಳಕಿನ ಹೊನಲು ಇನ್ನೂ ಮಾನವ ಪ್ರಜ್ಞೆಯನ್ನು ಮುಟ್ಟಿಲ್ಲ. ಎಲ್ಲರೂ ಸುಖ ದುಃಖ ಸಾಗರದ ಪಯಣದಲ್ಲಿ ಹಿಗ್ಗಿನ ಹಾದಿ ಹುಡುಕುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಕವನಗಳನ್ನು 'ಅನುರಾಗ ಗೀತಗಳು', 'ವಿರಹಗೀತಗಳು', 'ಕೌಟುಂಬಿಕ ಭಾವಗೀತಗಳು', 'ಸ್ನೇಹಗೀತಗಳು'. 'ಸೌಂದರ್ಯಾನುಭೂತಿಯ ಅನುಭಾವಗೀತಗಳು', 'ಪ್ರೇಮತತ್ತ್ವದರ್ಶನ' ಎಂದು ಸ್ಥೂಲ ವಾಗಿ ವಿಂಗಡಿಸಲಾಗಿದೆ. ಅಂಬಿಕಾತನಯದತ್ತರು ಸ್ತ್ರೀಯನ್ನು ನೋಡುವ ದೃಷ್ಟಿಯ ವೈಶಿಷ್ಟ್ಯವನ್ನು ಗಮನಿಸಿ 'ಗಂಡಸು-ಹೆಂಗುಸಿಗೆ' ಎಂಬ ಶೀರ್ಷಿಕೆಯಲ್ಲಿ ಕೆಲವು ಕವನ ಗಳನ್ನು ವಿಂಗಡಿಸಿ ಪ್ರಕಟಿಸಿದ್ದೇವೆ. ಕವಿಯ ಕಾವ್ಯಜೀವನ ಹಾಗೂ ಭಕ್ತಿಜೀವನಕ್ಕೆ ಸಂಬಂಧಿಸಿದ ಸಮಕಾಲೀನ ಮಿತ್ರರನ್ನು ಕುರಿತ ಕವನಗಳನ್ನು 'ಸ್ನೇಹಗೀತಗಳು' ಎಂದು ವಿಂಗಡಿಸಿದ್ದೇವೆ.

ಪ್ರಚಲಿತ ಮಾನವಜೀವನದ ಹಲವಾರು ಮಾನಸಿಕ-ಬೌದ್ಧಿಕ-ಸಾಮಾಜಿಕ-ತಾತ್ತ್ವಿಕ ಸಂಘರ್ಷಗಳನ್ನು ಶುದ್ಧ ಒಲವಿನ ಸೂತ್ರದಿಂದ ಪರಿಹರಿಸಬಹುದು, ಎಂಬ ಬೇಂದ್ರೆಯವರ ಭಾವುಕತೆಯ ಕೆಚ್ಚನ್ನು ಅವರ ಕೃತಿಗಳನ್ನು ಓದಿದವರು ಗುರುತಿಸದೆ ಇರಲಾರರು. ತಾನು 'ಒಲವು-ಲಿಂಗದ' 'ಉದ್ಭವ-ವಾದಿ' ಎಂದು ಅವರು ಹೇಳಿಕೊಂಡಿದ್ದಾರೆ ('ಸಾಹಿತ್ಯದ ವಿರಾಟ್‌ಸ್ವರೂಪ'—ಪುಟ 128). 'ಪ್ರಸಾದಿಯ ಶಿವಲಿಂಗ ಸ್ಥಲಕ್ಕೂ, ಪ್ರಾಣಲಿಂಗಿಯ ಜಂಗಮಲಿಂಗ ಸ್ಥಲಕ್ಕೂ ಮಧ್ಯೆ ಉದ್ಭವಿಸುವ ಒಲವು ಲಿಂಗದ ಸ್ಥಲವು ಜೀವಾತ್ಮ-ಅಂತ ರಾತ್ಮ-ಪರಮಾತ್ಮರ ಸಾಮರಸ್ಯದ' ಭೂಮಿಕೆ. ಇದರ ತಾತ್ತ್ವಿಕ ವಿವೇಚನೆಯನ್ನು 'ಒಲವು ಲಿಂಗದ ವಿಚಾರ-ವಿವೇಕ' ಎಂಬ ಲೇಖನದಲ್ಲಿ ತನ್ನದೇ ಕಾವ್ಯಾತ್ಮಕ ಸಾಂಕೇತಿಕ ಪರಿಭಾಷೆಯಲ್ಲಿ ಮಂಡಿಸಿದ್ದಾರೆ (ಸಾಹಿತ್ಯದ ವಿರಾಟ್ ಸ್ವರೂಪ—ಪುಟ 1002). ಈ ನಿಲವಿನಲ್ಲಿ ಅವರು ಬರೆದಿರುವ–ಕಾವ್ಯಮೀಮಾಂಸೆಯ ಲೇಖನಗಳ, ಸಾಹಿತ್ಯ ವಿಮರ್ಶೆಯ ಪ್ರಬಂಧಗಳ, ಆಧ್ಯಾತ್ಮಿಕ-ತಾತ್ತ್ವಿಕ ಬರವಣಿಗೆಗಳ ಅಧ್ಯಯನ ನಡೆಸುವವರಿಗೆ ಈ ಸಂಗ್ರಹ ದಲ್ಲಿ ಬರುವ ಅನೇಕ ಅನುಭಾವಿಕ–ತಾತ್ತ್ವಿಕ ಕವನಗಳ ಸ್ವಾರಸ್ಯ ಚೆನ್ನಾಗಿ ಹೊಳೆದೀತು.

ಭಾರತದ ಹಾಗೂ ಕರ್ನಾಟಕದ ಜನಗಣಮನದಲ್ಲಿ ಬೇರೂರಿರುವ ಹಲವು ವಿಶಿಷ್ಟ ಸಾಂಸ್ಕೃತಿಕ ಮೌಲ್ಯಗಳನ್ನು ಸೋಸಿ ತಂದ ಜೀವನದರ್ಶನದ ರಸಘಟ್ಟಿ, ಬೇಂದ್ರೆಯವರ ಕೃತಿಗಳಲ್ಲಿದೆ. ಈ ಕವನಸಂಗ್ರಹವು ಬೇಂದ್ರೆಯವರ ರಸಮಯ ಜೀವನದರ್ಶನದ ಮತ್ತು ಮಾನವದರ್ಶನದ ಅಭ್ಯಾಸಕ್ಕೆ ಪೋಷಕವಾಗಲಿ ಎಂದು ಹಾರೈಸುತ್ತೇವೆ.

–ನಿ. ಶ್ರೀಶ ಬಲ್ಲಾಳ

# ಪೀಠಿಕೆ - ೩

ಅಂಬಿಕಾತನಯದತ್ತರ 'ಸಖೀಗೀತ', 'ಕಾಮಕಸ್ತೂರಿ', 'ಕನ್ನಡ ಮೇಘದೂತ', 'ಮತ್ತೆ ಶ್ರಾವಣ ಬಂತು' – ಈ ನಾಲ್ಕು ಕೃತಿಗಳಲ್ಲಿ ಪ್ರಣಯವೇ ಪ್ರಧಾನವಸ್ತು. ಇನ್ನುಳಿದ ಕವನಸಂಗ್ರಹಗಳಲ್ಲಿ 'ಗರಿ', 'ಕೃಷ್ಣಾಕುಮಾರಿ ಮತ್ತು ಹಾಡು-ಪಾಡು', 'ನಾದ ಲೀಲೆ', 'ಉಯ್ಯಾಲೆ', 'ಗಂಗಾವತರಣ'— ಈ ಕೃತಿಗಳಲ್ಲಿ ಕವಿಯ ಹೆಚ್ಚಿನ ಪ್ರಣಯಗೀತ ಗಳನ್ನು ಕಾಣಬಹುದು. ಮೇಲೆ ಸೂಚಿಸಿದ ಕೃತಿಗಳನ್ನು ಮತ್ತು ಪದ್ಯಗಳನ್ನು ಮಾತ್ರ ಒತ್ತಟ್ಟಿಗೆ ಸೇರಿಸಿ 'ದ. ರಾ. ಬೇಂದ್ರೆಯವರ ಪ್ರಣಯಗೀತಗಳು' ಎಂಬ ಶಿರೋನಾಮೆ ಯಿಂದ ಪ್ರಕಟಿಸಬಹುದಾಗಿತ್ತು–ಒಂದು ದೃಷ್ಟಿಯಿಂದ. ಆದರೆ ಬೇಂದ್ರೆಯವರ ದೃಷ್ಟಿ ಯಲ್ಲಿ 'ಪ್ರೀತಿ' ಎಂಬುದು 'ಸರ್ವವ್ಯಾಪಿ' ತತ್ತ್ವವಾಗಿದ್ದು, ಅದರಲ್ಲಿ ಜೀವನದ ರಹಸ್ಯ ಗಳೆಲ್ಲವೂ ಹುದುಗಿರುವುದರಿಂದ, ಈ ಸಂಗ್ರಹದಲ್ಲಿ 'ಪ್ರಣಯ' 'ಪ್ರೇಮ' 'ಒಲವು' ಎಂಬ ಶಬ್ದಗಳನ್ನು ಬಹಳ ವ್ಯಾಪಕವಾದ ಅರ್ಥದಲ್ಲಿ ಬಳಸಲಾಗಿದೆ. 'ಸಖೀಗೀತ', 'ಕನ್ನಡ ಮೇಘದೂತ', 'ಮತ್ತೆ ಬಂತು ಶ್ರಾವಣಾ'-ಇವು ಸ್ವಯಂಪೂರ್ಣ ಕೃತಿಗಳಾಗಿದ್ದು ಪ್ರತ್ಯೇಕ ವಾಗಿ ಪ್ರಕಾಶನಗೊಂಡಿರುವುದರಿಂದ ಈ ಕೃತಿಗಳ ಆಯ್ದ ಭಾಗಗಳನ್ನಷ್ಟೇ ಇಲ್ಲಿ ಸೇರಿಸಿ ಕೊಳ್ಳಲಾಗಿದೆ. ಒಲವಿನ ಗೀತಗಳ ಸಮಗ್ರ ಅಧ್ಯಯನ ನಡೆಸುವವರು ಈ ಕೃತಿಗಳನ್ನು ಪೂರ್ತಿಯಾಗಿ ಬಳಸಿಕೊಳ್ಳಬೇಕು.

ಈ ಕವನಸಂಕಲನದ ಸಂಕಲ್ಪವನ್ನು ನನ್ನ ಮಿತ್ರರಾದ ಬನ್ನಂಜೆ ಮತ್ತು ಬಲ್ಲಾಳರ ಜತೆಗೂಡಿ ಮನಸ್ಸಿನೊಳಗೇ ರೂಪಿಸಿ ವರ್ಷ ಮೂರಾದರೂ ಅದು ಮೈದಳೆಯಲು ಬಹುಕಾಲ ಹಿಡಿಯಿತು. ಡಾ. ತೋನ್ಸೆ ಮಾಧವ ಅನಂತ ಪೈ ಅವರ 80ನೆಯ ಹುಟ್ಟು ಹಬ್ಬದಂದೇ ಪ್ರಕಟವಾಗಬೇಕಾಗಿದ್ದ ಈ ಕೃತಿ ಇನ್ನಷ್ಟು ವಿಳಂಬವಾಗಿ ಮುದ್ರಿತವಾದರೂ ಅತ್ಯಂತ ಸುಂದರವಾಗಿ ಪ್ರಕಟವಾಯಿತೆನ್ನುವುದು ನಮ್ಮ ಸಮಾಧಾನ. ಇದರ ಅಂತರಂಗದ ಸೌಂದರ್ಯ ಏನೆಂದು ಗೆಳೆಯ ಬನ್ನಂಜೆ ಪೀಠಿಕೆ-1ರಲ್ಲಿ ನಿರೂಪಿಸಿದ್ದಾರೆ. ಅದರದೇ ಇನ್ನೊಂದು ಮುಖವನ್ನು ಗೆಳೆಯ ಶ್ರೀಶ ಬಲ್ಲಾಳರು ಪೀಠಿಕೆ-2ರಲ್ಲಿ ವಿಶ್ಲೇಷಿಸಿದ್ದಾರೆ. ಇದನ್ನು ಪ್ರಕಟಿಸಲು ಅನುಮತಿ ನೀಡಿ ಹರಸಿದ ಮಹಾಕವಿ ದ. ರಾ. ಬೇಂದ್ರೆಯವರ ಪ್ರೇಮಕ್ಕೆ ನಾವು ಮೂವರೂ ಚಿರಋಣಿಗಳು : 'ಒಲವೆ ನಮ್ಮ ಬದುಕು' ಎಂಬುದರಲ್ಲಿನ ಕೆಲ ಕವನಗಳನ್ನು ಆಧರಿಸಿ ಭಾರತದ ಅತಿ ಮುಖ್ಯ ಕಲಾವಿದ ಶ್ರೀ ಕೃಷ್ಣ ಹೆಬ್ಬಾರರು ಬೇಂದ್ರೆಯವರ ಮೇಲಿನ ಅಭಿಮಾನಕ್ಕೂ, ನಮ್ಮ ಪ್ರೀತಿಗೂ ಕಟ್ಟುಬಿದ್ದು, ಎಂಟು ರೇಖಾ ಚಿತ್ರಗಳನ್ನು ಬರೆದುಕೊಟ್ಟು ಉಪಕರಿಸಿದ್ದಾರೆ–ಅವರಿಗೆ ನಮ್ಮ ಅನಂತ ವಂದನೆ. ಮಣಿ ಪಾಲ ಪವರ್ ಪ್ರೆಸ್ಸಿನ ಬಂಧುಗಳು ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿದ್ದಕ್ಕಾಗಿ ಅವರಿಗೆ ಧನ್ಯವಾದ. ಕರಡು ತಿದ್ದುವುದರಲ್ಲಿ ನೆರವುಗೊಟ್ಟ ನೀರ್ಕಜೆ ತಿರುಮಲೇಶ್ವರ ಭಟ್ಟ ಹಾಗೂ ಹೆಚ್. ಕೃಷ್ಣಭಟ್ಟರಿಗೆ ವಂದನೆ. ಟಿಪ್ಪಣಿ ಬರೆದುಕೊಟ್ಟ ಡಾ. ವಾಮನ ಬೇಂದ್ರೆಗೆ ನಮಸ್ಕಾರ.

–ಕು. ಶಿ. ಹರಿದಾಸಭಟ್ಟ

## ರಸಿಕಾ ಪೇಳೊ !

ಕಬ್ಬಿನ ಗಣಿ ಡೊಂಕು, ಅದರ ಹಾಲದು ಡೊಂಕೆ
ರಸಿಕಾ ಪೇಳೊ ;

ಹುಬ್ಬಿನ ಗೆರೆ ಡೊಂಕು, ಕಣ್ಣ ನೋಟವು ಡೊಂಕೆ
ರಸಿಕಾ ಪೇಳೊ ;

ಬಿಲ್ಲ ಕಂಬಿಯು ಡೊಂಕು, ಬಿಟ್ಟ ಬಾಣವು ಡೊಂಕೆ
ರಸಿಕಾ ಪೇಳೊ ;

ಹಲ್ಲ ಸಾಲದು ಡೊಂಕು. ಬಿದ್ದ ಕಿರಣವು ಡೊಂಕೆ
ರಸಿಕಾ ಪೇಳೊ ;

ಚೆಂಬಾಳೆ ಮೈ ಡೊಂಕು, ಅದರ ತಿರುಳದು ಡೊಂಕೆ
ರಸಿಕಾ ಪೇಳೊ ;

ಬಿಂಬಾಧರವು ಡೊಂಕು, ಚುಂಬನವದು ಡೊಂಕೆ
ರಸಿಕಾ ಪೇಳೊ ;

ಬಿದಿಗೆ ಚಂದ್ರಮ ಡೊಂಕು, ಬೆಳದಿಂಗಳದು ಡೊಂಕೆ
ರಸಿಕಾ ಪೇಳೊ ;

ವಿಧಿಯಿತ್ತ ಕುಲ ಡೊಂಕು. ನನ್ನ ಪ್ರೀತಿಯು ಡೊಂಕೆ
ರಸಿಕಾ ಪೇಳೊ ;

# ರಾಗರತಿ

ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ
–ಆಗ–ಸಂಜೆಯಾಗಿತ್ತ ;
ನಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೋ ಬಿದ್ದಿತ್ತ ,
ಗಾಳಿಗೆ ಮೇಲಕ್ಕೆದ್ದಿತ್ತ

ಬಿದಿಗೆ ಚಂದ್ರನಾ ಜೋಗಚೀ–ನಗಿ–ಹೂ ಮೆಲ್ಲಗ ಮೂಡಿತ್ತ
ಮ್ಯಾಲಕ ಬೆಳ್ಳಿನ ಕೂಡಿತ್ತ ;
ಇರುಳ ಹೆರಳಿನಾ ಅರಳಮಲ್ಲಿಗೀ ಜಾಳಿಗಿ ಹಾಂಗಿತ್ತ
ಸೂಸ್ಯಾವ ಚಿಕ್ಕಿ ಅತ್ತಿತ್ತ.

ಬೊಗಸಿಗಣ್ಣಿನಾ ಬಯಕೆಯ ಹೆಣ್ಣು ನೀರಿಗೆ ಹೋಗಿತ್ತ
ತಿರುಗಿ ಮನೀಗೆ ಸಾಗಿತ್ತ ;
ಕಾಮಿ ಬೆಕ್ಕಿನ್ಹಾಂಗ ಭಾಂವೀ ಹಾದಿ ಕಾಲಾಗ ಸುಳಿತಿತ್ತ
ಎರಗಿ ಹಿಂದಕ್ಕುಳಿತಿತ್ತ.

ಮಳ್ಳಗಾಳಿ–ಸುಳಿ ಕಳ್ಳ ಕೈಲೆ ಸೆರಗನು ಹಿಡಿತಿತ್ತ
ಮತಮತ ಬೆರಗಿಲೆ ಬಿಡತಿತ್ತ ;
ಒಂದ ಮನದ ಗಿಣಿ ಹಿಂದ ನೆಳ್ಳಿಗೆ ಬೆನ್ನಿಲೆ ಬರತಿತ್ತ
ತನ್ನ ಮೈಮರ ಮರತಿತ್ತ.

# ಚೆಲುವ

ಯಾರವ್ವ ಇವ ಚೆಲುವಾ
ತನ್ನಷ್ಟಕ್ಕs
ತಾನs ನೋಡಿ ನಲಿವಾ !

(೧)

ನಗಿಯೊಂದು ಬಗಿಯಾಟಾ
ಕಣ್ಣು ಹಿಗ್ಗಿನ ತೋಟಾ
ಚವತೀ ಚಂದ್ರಮನ್ಹೋಲುವಾ ;
ಚವತೀ ಚಂದ್ರಮ ಕೆಳಗ
ಹಣೆಕೀ ಹಾಕಿದ್ಹಾಂಗ
ಹೋಲುವಾ ಹಣೆಯೊಲವಾ
ನೋಡವ್ವಾ
ಯಾರವ್ವಾ ಇವ ಚೆಲುವಾ !

(೨)

ಒಡೆದಿಲ್ಲ ಇನ್ನೂ ಮಕಮಿಾಸಿ
ಒಡೆದಿಲ್ಲ ;
ತೊಡೆದಿಲ್ಲ ಇನ್ನೂ ತುಟಿಹಾಲು
ತೊಡೆದಿಲ್ಲ ;
ಹಿಡಿದಿಲ್ಲ ಕಣ್ಣಿಗೆ ಹೆಣ್ಣುಚ್ಚು
ಹಿಡಿದಿಲ್ಲ

(೩)

ನೆಂಬಿಕೊಂಡಿರಲಾಕ
ತುಪ್ಪಳ ತಲೆದಿಂಬೊ
ಎಂಬೋ ತೋಳ್ಮಿದು ಬಲವಾ

ಕಂಡವರ ಕಣ್ಣನ್ನ
ಸೋತಾಗ ಸೆರೆಹಿಡಿದು
ಇಡುವಂಥ ಎದೆ ಹರವಾ
ನೋಡವ್ವಾ

ನೋಡವ್ವಾ ನನ ಗೆಣತಿ
ಮೂಲೆಗೂಸು ಇರುವಾಗಿನ
ಕಾಮಣ್ಣನೊಲು ಕಾಣುವಾ

ಯಾರವ್ವಾ ಇವ ಚೆಲುವಾ
ತನ್ನಷ್ಟಕ್ಕ
ತಾನ ನೋಡಿ ನಲಿವಾ !



ಕಂಡವರ ಕಣ್ಣನ್ನ ಸೋತಾಗ ಸೆರೆಹಿಡಿದು ಇಡುವಂಥ ಎದೆ ಹರವಾ

—'ಚೆಲುವ'

# ಹರಕೆ

ಮಂದಗತಿ ಮಂದತರವಾಗಿ ಬಿಟ್ಟಿದೆ ; ಹುಲ್ಲೆ-
ಗಂಗಳೊಲು ಚಂಚಲತೆ ಕುಡಿಯೊಡೆಯಲಿದೆ ; ಉಡುಗಿ
ಮೈನಯದ ನೆಯ್ಗೆ ತೊಪ್ಪಲು ; ಹರೆಯ ಚಿಗುರಡಗಿ
ನೆತ್ತರದ ನೆರೆಗಂಪು ಹಳಸುತಿದೆ ಭರದಲ್ಲೆ.

ಹಾರುಹಕ್ಕಿಯ ಪುಚ್ಛವೆಣಿಸಲೆಳಸಿದ ಬೆಡಗಿ !
ವಿಜಯವಿಟ್ಠಲನ ಗುಡಿ ಭಣಗುಡುವ ತೆರದಲ್ಲೆ
ಹರುಹಲಿರುವೆದೆ ಬರಿದೋ ಬರಿದು ; ಮಿದುಸವಿಸೊಲ್ಲೆ
ಹುಟ್ಟದಿದೆ ; ಕೈನೀಡಿ ಬೆಳೆದು ನಿಂತಿಯೆ ಹುಡುಗಿ.

ದಿನದ ದಣಿವನು ಕಳೆಯೆ ತಂಗಿ ಹಾರುವ ಹಕ್ಕಿ
ಎರಗದಿರಲಿಲ್ಲ. ಕಟ್ಟಾಡಿಸಲು ಬರದಿರಲಿ
ಹುಡುಗ ಗಾಳಿ. ಅನಾದಿ ವಂಶದಾ ವೈಭವವೋ-
ದಯವ ಮೂಃಸಿಸಿ ಬಿಡುವ ತುಂಬಿ ಬರದಿರು. ನವನವೋ-
ನವ ಮನೋರಥ ಸಫಲ ಪೊಸ ಬಸಂತನೆ ಬರಲಿ.
ನಿನಗೆ ಕಾವಲವಿರಲಿ ನಿನ್ನ ಚಂದ್ರಮ–ಚಿಕ್ಕಿ.

# ವಾರಿನೋಟ

(ಹೊಳೆಯ ಮೇಲೆ)

ವಾರಿನೋಟ ಹಾರತಿತ್ತೋ ಹೊಳಿಮ್ಯಾಗ
ಹೊಸಾ ಹರ ಈಸತಿತ್ತೋ ಹೊಳಿಯಾಗ ॥ ಪಲ್ಲ ॥

೧

ಒಂದು ಬಳ್ಳಿ ಹೂಬಿಡಲಿತ್ತೋ ಹೊಳಿಮ್ಯಾಗ
ಗಾಳಿಯೊಂದು ಸುಳಿದಾಡತಿತ್ತೋ ಹೊಳಿಯಾಗ

೨

ಸೂಜಿಗಲ್ಲು ತಿರಗತಿತ್ತೋ ಹೊಳಿಮ್ಯಾಗ
ಸೂಜಿಯೊಂದು ತೇಲತಿತ್ತೋ ಹೊಳಿಯಾಗ

೩

ಸೆರಗು ಒಂದು ಅಲೆದಾಡತಿತ್ತೋ ಹೊಳಿಮ್ಯಾಗ
ಬೆರಗು ಒಂದು ನಲಿದಾಡತಿತ್ತೋ ಹೊಳಿಮಾಗ

೪

ತುಂಬಿಯೊಂದು ಹಾಡತಿತ್ತೋ ಹೊಳಿಮ್ಯಾಗ
ತಾವರ್‍ಯೊಂದು ಬಾಯ್ಬಿಡತಿತ್ತೋ ಹೊಳಿಯಾಗ

## ಕಾಮಕಸ್ತೂರಿ

(ಹೊಲದ ಹತ್ತರ)

ತಂದೇನಿ ನಿನಗೆಂದ
ತುಂಬಿ ತುರುಬಿನವಳ,
ಕಾಮಕಸ್ತೂರಿಯಾ
ತೆನಿಯೊಂದ.

ಅದನ ನೀ ಮುಡಿದಂದ
ಮುಡಿದಂಥ ಮುಡಿಯಿಂದ
ಗಾಳಿಯು ಸುಳಿಯೊಂದ
ಬಂದೆನಗ ತಗಲಿದಂದ
ತಣಿತಣಿತಣಿವಂದ
ಈ ಮನಕ.

ಅನ್ನೋ ಜನರು ಏನು
ಅಂತಃನ ಇರತಾರ
ಹೊರತಾದೆ ನೀ ಜನಕ.



ತಂದೇನಿ ನಿನಗೆಂದ, ತುಂಬಿ ತುರುಬಿನವಳ, ಕಾಮಕಸ್ತೂರಿಯಾ ತೆನಿಯೊಂದ.

— 'ಕಾಮಕಸ್ತೂರಿ'

# ಬಡವರ ಮಗಳು

(ಹಾದಿಯಲ್ಲಿ)

ಬಡವರ ಮಗಳಾಗಿ ನೀನು
ಸಡಗರ ನಿನಗೆಷ್ಟ
ಬಡಿವಾರ ನಿನಗ್ಯಾಕ ?

ಬಿಸಿಲು ಹಬ್ಬಿ ಗಾಳಿಯು ಹರಡಿ
ಮುಗುಳು ನಗೀ ಅರಳಿಸಲೊಲ್ಲಿ
ಎವಿಯಿಕ್ಕದೆ ದಿಟ್ಟಿಸಿದರೂ
ಉಗುರದಿಟ್ಟಿ ಇಟ್ಟ ನಡೆದಿ

ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದು ಮಗ್ಗಿಯೆ ಇರುವಿ
ಕಣ್ಣು ಮುಚ್ಚಿ ನಿನ್ನ ನೆನೆದೇ
ಎದೀ ಮುಗುಳು ತೆರೆಯಲೊಲ್ಲಿ

ಬಂಗಾರದ ಮಾಡದೀದ
ಸಿಂಗಾರದ ಮಳಿಗರಸೇನ
ಹ್ಯಾಂಗಾರ ಕಣ್ಮನಸೆತ್ತಿ
ಒಮ್ಮೆ ನೋಡ, ಒಮ್ಮೆ ನೋಡ.

# ನನ್ನವಳು

(ನಸುಕಿನ ಝಳುಕು)

೧

ತಂಬುಲದ ತುಟಿಯ ತೋರಿ
ಮಲ್ಲಿಗೆಯ ಮುಡಿದುಕೊಂಡು
ಮೆಲ್ಲಗಾಗಿ ಬರುವವಳ್ಯಾರ಼ ?
ಸಂಜಿ ಏನ಼ ?

೨

ಮೇಲ ಸೆರಗು ಮೆಲ್ಲಗ ಸರಿಸಿ
ವಾರಿನೋಟ ಮೇಲಕ್ಕೆತ್ತಿ
ಮಳ್ಳಿಯಂತೆ ಮುರಕುವಳ್ಯಾರ಼ ?
ಇರಳು ಏನ಼ ?

೩

ಅಲೆದುಗಿಲಿದು ಉಲಿದೂ ಉಲಿದೂ
ನೆಟ್ಟ ನೋಟಾ ಕೀಳಲಾರ್ದ಼
ತಣ್ಣಗಾಗಿ ನಿಂತವಳ್ಯಾರ಼ ?
ನಸುಕು ಏನ್ಯ಼ ?

೪

ಹೊತ್ತೊತ್ತಿಗೆ ಹೊಂದಿಕೆಯಾಗಿ
ಹಲವಾದಿ ಒಬ್ಬಾಕೆಯಾಗಿ
ಹೌದ ಚನ್ನಿ ಹೌದ಼ ಚೆಲುವೀ
ನನ್ನವಳೇನ಼ ?

# ಅವನು-ಅವಳು

(ಗುರುತು)

ಅವಳು :–ನೀನು ಹೊರಟಿರುವದೆತ್ತ ?
ಅವನು :–(ಬರಿ ಸನ್ನೆಯಿಂದ) ಇತ್ತ—
'ಳು :–ಈ ಹಾದಿ ಮುಗಿದುದೆಲ್ಲಿ ?
'ನು ;–(ಬರಿ ಸನ್ನೆ) ಅಲ್ಲಿ—
'ಳು :–ಬುತ್ತಿ ಕೂಡಿಲ್ಲವಲ್ಲಾ ?
'ನು :–(ಬರಿ ಸನ್ನೆ) ಇಲ್ಲಾ—
'ಳು :–ಜೊತೆಗಿತೆಗೆ ಬೇಡವೇನು ?
'ನು :– ಏನು ?

ಅವನು :–ಗೊತ್ತುಗುರಿಯೇಕೆ ಬೇಕೋ ?
ಅವನು :–(ಬರಿ ಸನ್ನೆ) ಏಕೋ !
'ನು :–ಬರುವೆಯಾ ನೆರಳ ಹಾಗೋ ?
'ಳು :–(ಬರಿ ಸನ್ನೆ) ಹೇಗೋ !
'ನು :–ನನ್ನೊಳನುರಾಗಿ ನೀನೋ ?
'ಳು :–(ಬರಿ ಸನ್ನೆ) ಏನೋ !
'ನು :–ನನಗೆ ಬೇಕಾದುದೇನೇ ?
'ಳು :–(ಬರಿ ಸನ್ನೆ) ನೀನೇ !

# ಕತ್ತಲೋ ಕತ್ತಲು

(ಇಬ್ಬರಲ್ಲಿ)

ನಿಶೆಯಲ್ಲೊ ಎಲ್ಲೆಲ್ಲು । ರವಿಯಿಲ್ಲೊ ಶಶಿಯಿಲ್ಲ ॥
ತೇಜಗಳ ತುಣುತುಣುಕು । ಮಿಂಚುಹುಳ ಮಿಣುಮಿಣುಕು ॥
ಝಳುಳಕುಯಿದೆ ತುಳುಕುತಿದೆ । ಥಳಕಿದ್ದು ಬೆಳಕಿಲ್ಲೋ ॥
ಕಣ್ಣಿನಾ ಹಡಗಲು । ಬೆಳಕನ್ನು ಪಡೆಯಲು ॥
ಹೊರಟಿಹುದು ಹುಡುಕಲು । ಯಾವ ನಡುಗಡ್ಡೆಯಲೊ ॥
ಎತ್ತಲೂ ಕತ್ತಲು । ಎಲ್ಲಿಹುದು ಬಡಗಲು ॥
ಮುಗಿಲಿನಲಿ ಮೋಡಗಳು । ಕತ್ತಲೋ ಕತ್ತಲು ॥
ದೀಪದ ಬುಡದಲು । ಅಲ್ಲಿಯೇ ಹಡೆದೊಲು ॥
ಕಣ್ಣಿದ್ದು ಕಾಣದೊಲು । ಚಿಕ್ಕೆಗಳ ಸುತ್ತಲು ॥
ಮುಗಿಲಿನಾ ಮೊಗದಲು । ನಿದ್ದೆ ಹೋದವರೊಲು ॥
ಚಿಂತಿಸುವ ಚಿತ್ತದಲು । ಗುರಿಯಿರದ ಬಾಣದೊಲು ॥
ಎತ್ತಲೋ ಎತ್ತಲು । ಮುಂಗುರುಡ ಮನದೊಲು ॥

ಕತ್ತಲೋ ಕತ್ತಲು.

# ಬರಿಗೊಡದ ಬಾಲಿ

(ಅಗಲಿಕೆ)

೧

ಬರಿಗೊಡದ ಬಾಲಿ ಕೊಡನ್ಯಾಕ ತುಂಬಿಲ್ಲ
ದಡದಾಗ ನಿಂತೈ ಸುಮ್ಮನೆ ಕೋಲ
ದಡದಾಗ ನಿಂತೈ ನಿನಗ್ಯಾಕೀ ಚಿಂತೆ
ಜನುಮಕ ಬಂದು ದಿನವೇಸ ಕೋಲ

೨

ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೊ
ಮೊಲಿಹಾಲ ಕುಡಿದು ದಿನವೇಸ ಕೋಲ
ಮೊಲಿಹಾಲ ಕುಡಿದು ದಿನವೇಸ ತಂಗೆವ್ವ
ಹುಡಿಯಾಟವಾಡಿ ದಿನವೇಸ ಕೋಲ

೩

ಪಿಸಿಪಿಸಿ ನಕ್ಕು ಹುಸಿಹುಸಿ ನಾಚಿ
ಹುಡದೀಯ ಬಿಟ್ಟು ದಿನವೇಸ ಕೋಲ
ಹುಡದೀಯ ಬಿಟ್ಟು ಅಡಿಗಡಿ ಮುರಕದ
ನಡಿಗೀಯ ಹಿಡಿದು ದಿನವೇಸ ಕೋಲ

೪

ಬೆನ್ನೀಗೆ ಕೂದಲು ಬೀಸಾಗಿ ಕುಣಿದಾಡಿ
ಕೆನ್ನೀಗೆ ಕುರುಳು ಮುತ್ತಿಟ್ಟು ಕೋಲ
ಕೆನ್ನೀಗೆ ಕುರುಳು ಮುತ್ತಿಟ್ಟು ದಿನವೇಸು
ಹೆಡಮುಡಿ ಬಿಗಿದ ಹೆಳಲ್ಯಾಕಿ ಕೋಲ

೫

ದಿಟ್ಟನ್ನ ಮಾತಾಡಿ ದಿಟ್ಟೀಸಿ ನೋಡಿ
ದಿಟ್ಟಿಯು ತೆಗೆದು ದಿನವೇಸ ಕೋಲ
ದಿಟ್ಟಿಯ ತೆಗೆದು ದಿನವೇಸ ತಂಗೆವ್ವ
ದಟ್ಟಿಯು ಉಟ್ಟು ದಿಟ ಹೇಳ ಕೋಲ

೭

ಆಟದ ಗೊಂಬಿ ಮಗಳೆಂದು ನಂಬಿ
ಮಗ್ಗುಲದಾಗ ಮಲಗೀಸಿ ಕೋಲ
ಮಗ್ಗುಲದಾಗ ಮಲಗೀಸಿ ಮುದ್ದಿಟ್ಟು
ಹಿಗ್ಗಿಗ್ಗಿ ಕುಣಿದು ವರಸೇಸ ಕೋಲ

೭

ಕೆಲಬಲದಾಗ ಕುಣಿಕುಣಿವ ಕಣ್ಣು
ಎದಿ ಬದಿಬದಿಗೆ ಹುಡುಕಾಡಿ ಕೋಲ
ಎದಿ ಬದಿಬದಿಗೆ ಹುಡುಕಾಡಿ ದಣಿದು
ತಲೆಬಾಗಿ ಏಸು ತಿಂಗಳ ಕೋಲ

# ನೀರಿಗೆ ನಡೆದಾಗ

೧

ನೀರಿಗೆ ನಡೆದಾಗ ನೀರಿಗಿ ಚಲ್ಲಾಟ
ನೀರೆ ನೀರಿಲೆ ಬರುವಾಗ ಕಣ್ಣೀನ
ನೀರು ಇಳಿದಾವೊ ಗಲ್ಲಕ್ಕ

೨

ನೀರಾಗ ನಿಂತಾಗ ನೆರಳ ನೋಡುವ ನಾರಿ
ಎರಳೆಗಂಗಳ ಎವೆ ನಿಲಿಸಿದೆಷಬಲದ
ಕಣ್ಣಾಗ ನಿನ್ನ ಕರಿಗೊಂಬಿ

೩

ಹರೆಯೊಂದು ಹರಿನೀರ ತಿರೆಯೊಂದು ಕರಿನೀರ
ಹರದಿ ನಿನ್ನೆದೆಯು ಮುನ್ನೀರ ಜನುಮಾವು
ಹರಿಗಡಿಯದಂಥ ಹೊಳೆನೀರ

೪

ತಾವರಿ ಹೂವಾಗಿ ಯಾವರಿಗರಳಿತ್ತೊ
ಅವರಿಗೆ ತುಂಬಿ ತುಂಬ್ಯಾವ, ಬಾಡುತಲೆ
ತಾವ್ಯಾರೊ ಎಂದು ತೆರಳ್ಯಾವ

೫

ಹರಿವ ಗಂಗೀ ನೆರಿಗೆ ಹರಿಸೀದೆ ಕಣ್ಣೀರು
ಹರಹರ ಎಂದು ಹೊಳೆ ತೊರಿ ಮೊರೆದಾಗ
ಹರನೆ ಕಿವಿಗೊಡುವ ದುಃಖಕ್ಕ

# ಅಕ್ಕರತಿ

ಗಳಗಳ ಗಾಳಿಯು ಜಳಜಳ ನೀರಾಗ
ಸುಳಿಸುಳಿದು ಬಂದು ನೀರಾಟ ಆಡುತಲೆ
ಒಲಿದೊಲಿದು ನೀರು ತೆರಿತೆರಿ

ಜಿಸುಗುಮಿಾನದ ಜಾತ್ರಿ ಜರತಾರಿ ರೇಸಿಮಿ
ಜರಥ್ಥಾಂಗಂಚೀಲೆ ನೆರೆದಾವ ಕರದsರ
ಪರಿದು ನೀರಾಗ ಸರದಾವ

ಹುಳಹುಪ್ಪಡೆಂತಂದು ಹೀಗಳಿಗಳಿದಿಲ್ಲ
ಹೂವು ಹೂವಿನ ಬಟ್ಟಲ ಜೇನಿಲೆ
ಹರ ತಂದಿ ತುಂಬಿ ಇಟ್ಟಾನ

ಚಿಕ್ಕ ಮರಿಗೆ ತನ್ನ ರೆಕ್ಕಿ ಬೀಸಣಿಕೀಲೆ
ಅಕ್ಕ ಜಳಕಕ್ಕ ಹಾಕ್ಯದ ನೋಡವ್ವ
ಹಕ್ಕಿಜಾತ್ಯಾನ ಅಕ್ಕರತೆ

ಅಂತರಗಂಗೀಮ್ಯಾಗ ಕುಂತ ಹಕ್ಕೀ ಜೋಡ
ಅಂತಃಕರಣವ ನೋಡೇನ ; ಅಗಲುತಲೆ
ಅಂತಲಕೀಲೇನ ಕೂಗ್ಯಾವ

# ಜನುಮದ ಜಾತ್ರಿ

ನೇತ್ರಪಲ್ಲವಿಯಿಂದ ಸೂತ್ರಗೊಂಬೀ ಹಾಂಗ
ಪಾತ್ರ ಕುಣಿಸ್ಯಾನ ಒಲುಮಿಾಗೆ ದಿನದಿನ
ಜಾತ್ರಿಯೆನಿಸಿತ್ತ ಜನುಮವು ೧

ಹುಬ್ಬು ಹಾರಸಿದಾಗ ಹಬ್ಬ ಎನಿಸಿತು ನನಗ
'ಅಬ್ಬ' ಎನಬೇಡ್ವ ನನ ಗೆಣತಿ ಸಾವಿರಕ
ಒಬ್ಬ ನೋಡವ್ವ ನನ ನಲ್ಲ ೨

ಕಣ್ಣೆತ್ತಿ ಎತ್ತಿದರ ಹುಣ್ಣೀವಿ ತೆರಧಾಂಗ
ಕಣ್ಣು ಏನಂತ ಬಣ್ಣಿಸಲೆ ಚಿತ್ತಕ್ಕ
ಕಣ್ಣು ಬರೆಧಾಂಗ ಕಂಡಿತ್ತು ೩

ಹೇಸಿರಲು ಈ ಜೀವ ಆಸಿ ಹುಟ್ಟಿಸುತ್ತಿತ್ತು
ಮಿಾಸಿ ಮೇಲೆಳೆದ ಕಿರಿಬೆರಳು ಕೆಂಗಯ್ಯ
ಬೀಸಿ ಕರೆದಾನ ನನಗಂತ ೪

ತುಂಬುಲತುಟಿ ನಗಿ ಹೊಂಬಿಸಿಲೆಂಬಂತೆ
ಬಿಂಬಿಸಿತವ್ವಾ ಎದಿಯಾಗ ನಂಬೀಸಿ
ರಂಬೀಸಿತವ್ವಾ ಜೀವವ ೫



ನೇತ್ರಪಲ್ಲವಿಯಿಂದ ಸೂತ್ರಗೊಂಬೀ ಹಾಂಗ ಪಾತ್ರ ಕುಣಿಸ್ಯಾನ ಒಲುವಿಂಗೆ—

—'ಜನುಮದ ಜಾತ್ರಿ'

## ಒಲುಮೆಯ ಕಿಚ್ಚು

೧

ನೀರನ ನೋಟಕ್ಕ ನೀರು ಕಡೆದಿತು ಜೀವ
ಧೀರ ಧೈರ್ಯಾವ ಕಳೆದಾನ ನನ್ನೊಂದ
ತೀರ ಮರುಳಿಯ ಮಾಡ್ಯಾನ

೨

ಸುಗ್ಗಿ ನಗಿ ನಕ್ಕಾಗ ಮೊಗ್ಗಿ ಬಿಚ್ಚಿತ ಒಳಗ
ಹಿಗ್ಗಿ ಪಾಡಾಗಿ ಮಾಗಿಸಿತು ಹರೆಯುವು
ಬಗ್ಗದ ಎದೆಯ ಬಾಗಿಸಿತು

೩

ಮಾಗಿ ಮೂಡಲಗಾಳಿ ತಾಗಿದ ಬನಧಾಂಗ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರsು ಸುಗ್ಗಿಯಾ

೪

ಆಡಿ ಜೀವದ ಗಾಣಾ ನೋಡ ಹಿಂಡಿತು ಪ್ರಾಣಾ
ಕಾಡತಾನ್ಯಾಕsು ಆ ಜಾಣ ಕೇಳಲ್ಲ
ಹಾಡು ತಲ್ಲಣದ ತಿಲ್ಲಾಣ

೫

ಬಾತುಗೋಳಿ ಹಾಂಗ ಜಾತಕದ ಜಾತ್ಯಲ್ಲ
ನಾತ ನೀರಾಗ ಅದರಾಟ, ಇದರೂಟ
ಮಾಸಲಳಿಯದ ಮಳಿಯಾಗ

೬

ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲುಜೀವ ಕಾದು ಕಮರೀತು ಒಳುಜೀವ
ಒಲುಮಿಗೆ ಹ್ಯಾಂಗೊ ಬಾಳೀತು

# ಗಿಣಿ ಹೇಳ !

ಕವಳ ಮೆಲ್ಲುವ ಬಾಯು ಹವಳತುಟಿ ಹಿಂಡುತ್ತ
ನಿವಳ ನಿಂತಾಳ ನಿಲಿವಿಲಿ, ಗಿಣಿ ಹೇಳ
ಇವಳ ಮನವೆಲ್ಲಿ ಇರಬಹುದು ೧

ಅಚ್ಚವಳ ಹಲ್ಲೀಗೆ ಸರಿಮುಚ್ಚು ಮಲ್ಲೀಗೆ
ನಿಚ್ಚನಿರಂತರ ಇದು ಸುಗ್ಗಿ, ಗಿಣಿ ಹೇಳ
ಬಿಚ್ಚಿದವ ಏನು ಬಾಡಿದವ ೨

ಕಾಡಿಗೆಗಣ್ಣಿಗೆ ಕಾಡಿಗೆ ತೀಡ್ಯಾಳ
ಕಾಡಿನ ಕಡೆಗೆ ಕಣ್ತಿರುವಿ, ಗಿಣಿ ಹೇಳ
ಪಾಡಿಗೆ ಬಂದಳಿವಳೇನು ೩

ಕಾಂತಾರಕ್ಹೋಗ್ಯಾನ ಕಾಂತ ನಿನ್ನವನೇನ
ಕಾಂತ ಏಕಾಂತ ಬಯಸಿದೆ, ಗಿಣಿ ಹೇಳ
ನಿಂತಾಳ ಕಾದು ನಿನಗಾಗಿ ೪

ಪರುಶ ಕಬ್ಬಿಣಕ್ಕ ಸ್ಪರುಷ ಮಾಡಿಧಾಂಗ
ಪುರುಷನ ಧ್ಯಾನ ಸರಸಿಗೆ, ಗಿಣಿ ಹೇಳ
ಹರುಷ ರೋಮಾಂಚ ತಳೆದಾಳ ೫

# ಕಂಡ ತಪ್ಪು

ಒಂದ ಕ್ಷಣಾ ಕಂಡ ತಪ್ಪಿಗೆ —ಎಂದಿನತನಕಾ ಕೊರಗೋದ
—ಕೊರಗೋದಽ ಮತ್ತ ಸೊರಗೋದಽ
ಕಂಡ ರೂಪ ಕಂಡರಿಸುತ್ತಾ —ಕಂಡಕಡೆಗೂ ಕೂಡೋದಽ
—ಕೂಡೋದ್ಯ ಮತ್ತ ನೋಡೋದಽ
ಕನಸಿನೊಳಗೂ ಕಂಡಂತಾದರೂ —ಕಂಡಾಂಗಽ ಕನವರಸೋದಽ
—ವರಸೋದ್ಯ ಮತ್ತ ಬೆರಸೋದಽ
ಬೆಚ್ಚಿ ಎಚ್ಚತ್ತಾಗ ಕನಸಿನ —ಕನಡಿಯ ನೆರಳ ನೆನಿಯೋದ್ಯ
—ನೆನಿಯೋದಽ ಮತ್ತ ಮುನಿಯೋದಽ
ಕಂಡ ಕಣ್ಣಿಲೆ ಕಂಣ್ಣೀರ್ ಸುರಿಸಿ. —ನೆನೆದ ನೆನಪಿಗೆ ಬಯ್ಯೋದಽ
—ಬಯ್ಯೋದಽ ಮತ್ತ ಸುಯ್ಯೋದಽ
ಬೆಳೆವ ಬದುಕಿಗೆ ಬಾಯಿಬಿಟ್ಟು —ಸುಟ್ಟ ದೈವಕ ನೋಯೋದಽ
—ನೋಯೋದಽ ಮತ್ತ ಸಾಯೋದಽ
ಅದನೂ ಕಾಣದ ಬಾಳೂ ಕೀಳು —ಸಾವಽ ಮೇಲು ಅಂದೇನ್ಯ
—ಅಂದೇನಽ ಮತ್ತ ಮುಂದೇನಽ

ಒಂದ ಕ್ಷಣಾ ಕಂಡ ತಪ್ಪಿಗೆ
ಎಂದಿನತನಕಾ ಕೊರಗೋದಽ !

# ಚಿತ್ರ

ಕೈಗಲ್ಲ .......................
(ಬಳಿಯಲ್ಲಿ ನಲ್ಲನಿಲ್ಲ!)

ಹುಬ್ಬುಗೆಯ್ಯು.................
(ಕಾಣುವುದೆ ದೂರ ಮೈಯು!)

ಗದ್ದ ಬೆರಳು....................
(ಕಂಡಳೇ ನಲುಮೆದಿರುಳು!)

ತೆರೆದ ತೋಳು..................
(ಒಂದಾದವೆರಡು ಹೋಳು)

ನಗುವು ಬಿಕ್ಕು...................
(ಒಲುಮೆಯಲಿ ಹಾಸುಹೊಕ್ಕು!)

# ಮಾಯಾಕಿನ್ನರಿ

ಮರುಳು ಮಾಡಾಕ ಹೋಗಿ ಮರುಳಸಿದ್ಧನ ನಾರಿ
ಮರುಳಾಽಗಾಳೂ ಜಂಗಮಯ್ಯಾಗ
ಕಿನ್ನರಿ ಆಗ್ಯಾಳ ಕೈಯಾಗ
ನುಡಿದಾಳ ಬಂದ್ಹಾಗ ಮೈಯಾಗ ॥ ಪಲ್ಲವಿ ॥

ಆಡುತಾಡುತ ಬಂದು ಸಿಂಗಾರಸೊಳ್ಳೀಹಾಂಗ
ಹಾಡಿಲೆ ಕಿವಿಗಲ್ಲ ಕಡಿದ್ಯೇನ
ಹಾದಿ ತಪ್ಪಿಸಿಕೊಂಡ ಗುಂಗಿಯು ಹುಳಧಾಂಗ
ಗುಣುಗುಣು ಗೊಣಗುಟ್ಟಿ ನುಡಿದ್ಯೇನ
ತನ್ನೊಡೆಯನ ಕೂಡಾ ಚಿನ್ನಾಟ ನಡಿಸೀದ
ಕುನ್ನಿ ಕುಂಞ್‌ಗುಡುವಾಟ ಹಿಡಿದ್ಯೇನ
ಮುಟ್ಟಿದರ ಮರುಕವ ವಯ್ಯಾರ ಕಲಿತೆಲ್ಲಿ
ಸುಳ್ಳೀನ ಸಿಡಿಮಿಡಿ ಸಿಡಿದ್ಯೇನ

ಎದೆಗೊತ್ತಿ ಹಿಡಿದರು ಮುತ್ತಿಟ್ಟು ಮತ್ತಿಷ್ಟು
ಮುಳಮುಳು ಸುಮ್ಮನೆ ಅತ್ತೇನ
ಕೈಯಾಡಿಸಿದಂತೆ ಮೈಕದ್ದು ನಡುಗುವಿ
ಇದು ಹೊಸ ಗಮಕದ ಗತ್ತೇನ
ಮೊದಲ ಭೆಟ್ಟಿಗೆ ಬಂದ ಮಳ್ಹೆಣ್ಣು ಮಾಡಿಧಾಂಗ
ತುಟಿ ಕಚ್ಚಿ ತಡವರಿಸಿ ತಡದೇನ
ತಂತ್ಯಲ್ಲ ; ಜೀವದ ತಂತು ನೀ. ಅಂತ್ಯದ
ಶ್ರುತಿ ಹಿಡಿದು ಜತಿ ಹಿಡಿದು ನಡೆದೇನ

ಕಂಕಣ ಕಾಲುಂಗರಕ ಮೆಲ್ಲುಸಿರ–ಛಂದಕ
ಕುಣಿತಾನ ನಡೆದಾಂಗ ಕಾಲ್ಯಾಗ
ಕರಗಿ ಬಾ, ಆರಗಿ ಬಾ, ಎರಗಿ ಬಾ, ಸಣ್ಣಾಗಿ
ಸಕ್ಕರಿ ಬೆರೆದಾಂಗ ಹಾಲ್ಯಾಗ

ನಂಬಿಸಿ ರಂಬಿಸಿ ಚುಂಬಿಸಿ ಎಡೆಗೊಂಬಿ
ಬಿಂಬೀಸಿ ಎದೆದೊಳಗ ಅಂಧ್ಯಾಂಗ
ರಘಣಣ ಮಿಡಿದಾವ ತಂತಿ ; ಗೆಜ್ಜಿ ಪೈಜಣ ಕಟ್ಟಿ
ಮಾಯೆಯೆ ಮೈಯೊಳಗ ಬಂಧಾಂಗ

ಅಗಲಿದ ಇನಿಯನ ಫಕ್ಕನೆ ನೋಡುತ
ಬಸಿರ ಹೂ ಕುಲುಕುಲು ನಕ್ಕ್ಯಾಂಗ
ನಲ್ಲ ಮುಟ್ಟಿದ ಗಲ್ಲ, ನಲ್ಲೆಯ ಮೈಯೆಲ್ಲ
ಹಿಗ್ಗಿನ ಮುಳ್ಳಿಗೆ ಸಿಕ್ಯಾಂಗ
ಜುಮ್ ಜುಮು ರುಮುಜುಮು ಗಂಗುಣು ದುಮುದುಮು
ನಾದದ ನದಿಯೊಂದು ನಡೆಧಾಂಗ
ಗಲ್ಲಗಲ್ಲಕೆ ಹಚ್ಚಿ ನಲ್ಲನಲ್ಲೆಯರಿರುಳು
ಗುಜುಗುಜು ಗುಲುಗುಲು ನುಡಿಧಾಂಗ

ಹೆಣ್ಗಂಡು ಜೇನ್ನೊಣ ಮುದ್ದಾಡಿ ಕಚ್ಚಾಡಿ
ಹೂಜೇನ ಹನಿಹನಿ ಕುಡಿಧಾಂಗ
ಮಂಕಾಗಿ ಮೂಕಾದ ಮನದ ಮಿಡುಕಾಟದ
ಮೊಗ್ಗಿಗೆ ಬಾಯಿಲ್ಲಿ ಒಡಿಧಾಂಗ

ಸಂಜೀಯ ಮುಗಿಲಾಗ ರೋಞ್‌ಬಿಲ್ಲ ಪಟವೊಂದು
ಗಾಳಿ-ಸುಳಿಗೆ ಶ್ರುತಿ ಹಿಡಿಧಾಂಗ
ಗಗನಸಂಚಾರದ ನಾರದನ ವೀಣೆಯು
ಹಾಡೀನ ತೆರಿತೆರಿ ಬಡಿಧಾಂಗ
ಆತನೀತನವಂತ ಯಾತನದ ಯಾತನೆಯು
ಯಾತ ಕಿರುಗುಟ್ಟೋದು ನಿಂಧಾಂಗ
ನಾನೀಗ ನುಡಿ ನುಂಗಿ ತಾನೀನ ತಾನೆ ತಾ
ತಾನಾಗಿ ತನನನನ ಬಂಧಾಂಗ
ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು
ಹತ್ತಾಗಿ ಜತ್ತಾಗಿ ಸುಳಿಧಾಂಗ
ದಣಿದ ಜೀವದ ಮ್ಯಾಲೆ ಜೇನಿನ ಸುರಿಮಳಿ
ಜೇಂಗುಟ್ಟಿ ಹನಿಹನಿ ಇಳಿಧಾಂಗ

ಪ್ರಕೃತಿ ಪುರುಷಗೆ ಸೋತು ಪ್ರಾಣದ್ದಂಜಿಯೆ ನೂತು
ಅನುಭವದ ಕಿವಿಮಾತು ಆಧಾಂಗ
ಹಾಸಾದ ಹಾಡೀಗೆ ಹೊಕ್ಕಾಕತು ಕಿನ್ನರಿ
ನೇಯ್ಗಿಯೊಳಗ ನೂಲು ಹೋಧಾಂಗ
ಜೀವದ ರಸ ಹಿಂಡಿ ತುಂತೂರು ಮಳೆಯಾಗಿ
ತಂತಿಯ ತುಂಬೆಲ್ಲ ಸಿಡಿಧಾಂಗ
ಮರುಳಸಿದ್ಧನ ಕೈಯ್ಯ-ಕಿನ್ನರಿಯಾಗಿ ಸಿಕ್ಕ
ಮಾಯೆಯೆ ಮೈಗೆ ಮೈ ನುಡಿಧಾಂಗ

# ಪೋರಿ ಪೋರ

ಪೋರೀ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವs
ಬೇರೆ ಇಲ್ಲಾ । ಇದ್ದರೆ—
ಶಿವನೇ ಬಲ್ಲಾ.

ಯಾಕ ? ಏನು ? ಎಲ್ಲಿಗಂತ
ನಾಕು ಮಾತು ಕೂಡಾ ನಾವು
ಒಬ್ಬರಿಗೊಬ್ಬರು ಆಗs
ಕೇಳಲಿಲ್ಲಾ । ಉತ್ತರಾ
ಹೇಳಲಿಲ್ಲಾ.

ಹೆಣ್ಣು ಮಣ್ಣು ಹ್ಯಾಳಂತs
ಬಣ್ಣ ಕಡೆಬಾಳದಂತs
ಬಾಳುವೀ ಸುಳ್ಯಾಟಂತs
ಹೆದರಲಿಲ್ಲಾ । ಯಾರೂ
ಹೆದರಿಸಲಿಲ್ಲಾ.

ಆಡಿದ್ದೊಂದs ನೋಡಿದ್ದೊಂದ
ಹೂಡಿದ್ದೊಂದs ಕೂಡಿದ್ದೊಂದs
ಬೇರೆ ಮಾತು ನನಗ ನಿನಗs
ಗೊತ್ತs ಇಲ್ಲಾ । ಗುಟ್ಟು
ಶಿವನೆ ಬಲ್ಲಾ.

# ನಾನು ಬಡವಿ

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಆದಕು ಇದಕು ಎದಕು.

ಹತ್ತಿರಿರಲಿ ದೂರವಿರಲಿ
ಅವನೆ ರಂಗಸಾಲೆ
ಕಣ್ಣುಕಟ್ಟುವಂಥ ಮೂರ್ತಿ
ಕಿವಿಗೆ ಮೆಚ್ಚಿನೋಲೆ

ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯ ಮುಟ್ಟೆ
ಅದೇ ಗಳಿಗೆ ಮೈಯ ತುಂಬ
ನನಗೆ ನವಿರುಬಟ್ಟೆ.

ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳಬಂದಿ
ಕೆನ್ನೆ ತುಂಬ ಮುತ್ತು.

ಕುಂದು ಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು ?
ಹೊಟ್ಟೆಗಿತ್ತ ಜೀವ ಫಲವ
ತುಟಿಗೆ ಹಾಲು ಜೇನು.



ನಾನು ಬಡವಿ ಆತ ಬಡವ ; ಒಲವೆ ನಮ್ಮ ಬದುಕು.

—'ನಾನು ಬಡವಿ'

# ಹಾಡು-ಪಾಡು

ಕಾಯ್ ಎನುತಿತ್ತು ಕಾವನ ಬಳ್ಳಿ
ಕಂಕಂಗಳೊಳೂ ಹೂವರಳಿ
ಎದೆವಡೆ ಪಾಡು ಒಲವಿನ ಹಾಡು
ಹಣ್ಣಲಿ ತುಂಬಿತು ರಸ ಮರಳಿ.

ಎಲೆ ರಸನಿಧಿಯೇ, ಹಾ ಹತ ವಿಧಿಯೇ
ಮೈ ತುಂಬಿದೆ ಸೆಲೆಸೆಲೆಯಾಗಿ
ಹೊರಗೋ ಹರಡಿದೆ ಜೀವಕೆ ಬೀಸಿದ
ಮಾತಿನ ಗೋಳಾಟದ ಬಲೆಯಾಗಿ.

# ನರಕದಲ್ಲಿ ಸ್ವರ್ಗ

ತಿರುಗೆ ತಿರುಗುತ್ತಿರುವ ಕಣ್ಣು ಮಿಣುಕುತ್ತಿಹವು
ಅದಿರುದುಟಿ ಕೆಚ್ಚನೆಯೆ ಅರಳುತಿಹವು
ಸುಳ್ಳಿ ಹಾಡುತ್ತ ಅಡ್ಡಾಡುತಿವೆ ಎದೆ ಹಲವು
ಮಬ್ಬುಗವಿಯುತ್ತಿಹವು ಮಿಂಚುತಿಹವು

ಯಾವ ಯಕ್ಷಿಣಿ ಮಾಯೆ ಯಾವ ಲೋಕದ ರೂಪೊ
ಕಲ್ಪನೆಯ ನಿಲುಕಿಸಿಯು ಹೇಳಲರಿಯೆ
ನೆತ್ತರದ ಓಕುಳಿಯೋ, ಅಪ್ಪುಗೈದೋಟಿಯೋ.
ಆಹ ಸ್ವರ್ಗವೆ ಎಂದೆ ನರಕ ತೆರೆಯೆ.

## ಓಂ ಸ್ವಾಗತಮಕ್ಕೆ

ಯಾರೇ ಯಾರೇ
ಅಪ್ಸರೆ ! ನೀರೇ
ನೀರನೆ ಕಡೆದೇ ಕಟ್ಟಿದರೇ ?
ತಪಗರ ಹೊಯ್ದು
ತಪತಪ ತೊಯ್ದು
ನೀರಿಳಿವುದು ನೀ ಮುಟ್ಟಿದರೇ ॥ ೧ ॥

ಎಲೆಲೇ ಭೀರು
ಕಣ್ಣಲಿ ನೀರು
ನಿನ್ನೊಳು ತೆರೆತೆರೆ ತೆರೆದಂತೆ
ಕಂಡರೆ ಪಂಜು
ಹಿಡಿದರೆ ಮಂಜು
ರುಚಿಸಲು ನಂಜೇ ಬೆರೆದಂತೆ ॥ ೨ ॥

ಹೂ ಪೂವಿನ ಕುಡಿ
ನೀನೆರಚುವ ನುಡಿ
ಜಗ ನಲಿವುದು ನೀ ಹೆತ್ತಂತೆ
ಮೈ ತೊಳೆಯುವ ಕೊಳ
ಮನ, ಇಂದ್ರಿಯಗಳ
ಆಮಿಷ ನೀ ಮೈವೆತ್ತಂತೆ ॥ ೩ ॥

ಹುಬ್ಬಿನ ಬಿಂಕವು
ಇಂದ್ರನ ಸುಂಕವು
ಸೋಕಿದರರೆ ಸೆರೆಗೊಳಿಸುತಿವೆ
ಉಳಿದುದ ಮರೆಸಿ
ಇರದರೊಳಿರಿಸಿ
ಸಾವೇ ಸ್ವರ್ಗವು ಎನಿಸುತಿಹೆ ॥ ೪ ॥

ಮುತ್ತಿನೊಳೆಲ್ಲು
ಹವಳದ ಸೊಲ್ಲು
ಮಾನವ ಕಂಗಳು ಮೈತುಂಬ
ಮೈಸೊರಗಿನ ಜಲ
ಕ್ಷಣಕ್ಷಣ ಚಂಚಲ
ಮನ ನಿಂತಿತು ದೀಪಸ್ತಂಭ ॥ ೫ ॥

ಪತಿತೋದ್ಧರಣ
ಸೂರ್ಯನ ಕಿರಣ
ಅಧಃಪತನವೋ ನಿನ್ನ ಗುಣ
ಆದರೂ ನೀನು
ಬಾನಿನ ಜೇನು.
ಒಳಬಲ್ಲವನಿಗೆ ನಾ ಶರಣ ॥ ೬ ॥

ಮಿಂಚಿನ ಕೆಳದಿ
ಮಣ್ಣಿಗೆ ಇಳಿದಿ
ರೆಕ್ಕೆಗಳವು ನಿನಗೇತಕ್ಕೆ
"ಉರಿ ಆರೆ ನಂದೆ
ಹೊತ್ತಿಸ ಬಂದೆ"
ಎಂಬೆಯಾ ಓಂ ಸ್ವಾಗತಮಕ್ಕೆ. ॥ ೭ ॥

# ಎರಡು ನಕ್ಷತ್ರ

ಕುಲಕುಲು ನಗುತಿಹ ಕೂಸಿನ ಹಾಗೆ
ಲುಕುಲುಕು ಹೊಳೆವುದು ಚುಕ್ಕಿ
ಇಳೆಗೇ ಬರುವುದೊ ಬಾನಿಗೆ ಕರೆವುದೊ
ಎಲ್ಲಿಗೊ ! ಏತಕ್ಕೆ ?
ನನ್ನೀ ಕಣ್ಣಿನ ಚಿಕ್ಕಾಗಸದಲಿ
ಮಿಂಚುವ ಈ ಮೀನಕ್ಕೆ
—ಎಲ್ಲಾ ಬೆಳಕು ಎಲ್ಲೀ ತಳಕು—
ಒಳಗೊಳಗೇ ನಾನಕ್ಕೆ.
ನಂಬಿಗೆ ದುಂಬಿದ ಈ ಬಿಂಬಕ್ಕೆ
ಹಗಲಿರುಳೆರಡೂ ಇಲ್ಲ
ಭ್ರಮಿಸದೆ ತನ್ನೊಳೆ ರಮಿಸುತ್ತಿಹುದು
ಎನುವೊಲು ತಾನೇನಲ್ಲ ! ?

# ಅಪರೂಪ ರಾಗ

ಆಹ್ಾ ಚೆಲುವೆ, ಓಹೋಽ ಚೆಲುವೆ, ಏನು ಚೆಲುವೆಯೋ
ನಿನ್ನ ನೀನೊ ಏನೊ ಏನೊ ನೋಡಿ ನಲಿವೆಯೋ

ರೂಪಕೇಕೊ ಹೆಸರು ದೆಸೆಯೊ ಪ್ಯೈಯ್ಯೋ ಬೇಕೋ ?
ತನ್ನ ತಾನೆ ಅಲ್ಲಿ ಈಸಿ ಇರಲು ಸಾಕೋ
ಗಾನಲೋಲೆ, ನಾಗಲೀಲೆಯಾಗಿ ಒಲಿವೆಯೋ ॥
। ಆಹಾ ಚೆಲುವೆ

ಬಾನಿನಲ್ಲಿ ಬರೆದ ಗೆರೆಯು ಹಾಗೆ ಮರೆವೆಯೋ
ಆ ಅಗಾಧ ಆಳದಲ್ಲಿ ನನ್ನ ಕರೆವೆಯೊ
ಇಲ್ಲೆ ನಾನು ಎಲ್ಲೊ ನೀನು ಕಿವಿಯೊಳುಲಿವೆಯೋ ॥
। ಆಹಾ ಚೆಲುವೆ

ಹಾಳಿ ಪಟವು ಗಾಳಿಯಲ್ಲಿ ತೇಲುವಂತೆಯೋ
ತಿಳಿವೆ ಆದ ಆಸೆಯನ್ನು ಹೋಲುವಂತೆಯೋ
ನೆಲಕೆ ಅಂಟಬೇಡವೆಂದು ಮಯ್ಯ ಕೊಲುವೆಯೋ ॥
। ಆಹಾ ಚೆಲುವೆ

# ದವನ-ಕವನ

ನೀನು ಈವೆ ನನಗೆ ದವನ
ನಾನು ಈವೆ ನಿನಗೆ ಕವನ !
ನನ್ನ ಭಾವಕೇನೆ ಎನ್ನು
ಅದುವೆ ಪ್ರೇಮ ಮೋಹವು
ನಿನ್ನ ಭಾವಕೇನು ಎನಲಿ ?
ನನಗೆಯೆ ಸಂದೇಹವು.

"ಶುಷ್ಕವಾದರೇನು ದವನ
ಪ್ಯೈಗಂಪನು ತರದೆ ಪವನ ?"
ಎನ್ನಬಹುದು ನೀನು ಎತ್ತಿ-
ಕಟ್ಟಿ ನಿನ್ನ ಕಾಣಿಕೆ
ನನ್ನ ಕವನ ತೋರಬಹುದು
ಬರಿಯ ಮಾತ ಪೋಣಿಕೆ.

ಪ್ರೇಮ ಮಾಡೆ ಮೋಹ-ಹವನ
ಕಟ್ಟಿಕೊಂಡಿತೆನ್ನ ಕವನ
ದವನ-ಗಿವನ ಕಂಪು–ಗಿಂಪು
ಎಲ್ಲ ಮರೆತ ಮೇಲೆಯು
ಮರೆವುದಿದರ ಭಾವ ಇದಕೆ
ಇಲ್ಲ ಹೊತ್ತು ವೇಳೆಯು.

ನಾನು ನೀನು ಬರಿಯ ನೆವನ
ಕೂಡಿಹವಿದೊ ದವನ-ಕವನ
ಒಂದು ಭಾವ ಒಂದು ಹಾವ
ಗೋಪು ಹೆಣೆದುಕೊಂಡವು
ಬಾಡದಂತೆ ಬದುಕುವಂಥ
ಬಾಳನೆಲೆಯ ಕಂಡವು.

ನನ್ನ ನಿನ್ನ ಜೀವ ಜವನ
ದವಡೆ ಮೀರಿಯೊಂದು ಭವನ-
ದಲ್ಲಿ ಒಂದನೊಂದು ಕಂಡು
ಗುರುತು ಹಿಡಿದು ಮುತ್ತವೇ ?
'ದವನಗಂಪೆ' 'ಕವನದಿಂಪೆ'
ಎಂದು ಎದೆಯನೊತ್ತವೇ ?

ಚಿಂತಿಸುತಿಹೆ ಅವನ ಇವನ
ಕಾಣೆ ತೆರೆದ ಹೃದಯಭವನ
ಬಾಡಬೇಡ ದವನದಂತೆ
ಮುಗಿಯಬಹುದು ಬೇಗ ಸಂತೆ
ಕಂಪಿಗೆ ಗರಿ ಮೂಡಿದಂತೆ

ಹಾರಿ ಸಾರಿ ಬಾ
ಸಖಿ ಸಖನಿಗೆ ಕೂಡಿದಂತೆ
ಆರಿ ಏರಿ ಬಾ.

# ಗಮುಗಮಾ ಗಮಾಡಸತಾವ ಮಲ್ಲಿಗಿ

ಗಮುಗಮಾ ಗಮಾಡಸತಾವꣳ ಮಲ್ಲಿಗಿ । ನೀವು ಹೊರಟಿದ್ದೀಗ ಎಲ್ಲಿಗೆ ?
ಗಮುಗಮಾ............

ತುಳುಕ್ಯಾಡತಾವ ತೂಕಡಿಕಿ
ಎವಿ ಅಪ್ಪತಾವ ಕಣ್ಣ ದುಡುಕಿ
ಕನಸು ತೇಲಿ ಬರತಾವ ಹುಡುಕಿ ॥
ನೀವು ಹೊರಟಿದ್ದೀಗ ಎಲ್ಲಿಗೆ ?

ಚಿಕ್ಕಿ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡಿ ಹರಳ
ಮನಸೋತು ಆಯಿತು ಮರುಳ ॥
ನೀವು ಹೊರಟಿದ್ದೀಗ ಎಲ್ಲಿಗೆ ?

ಗಾಳಿ ತಬ್ಬತಾವ ಹೂಗಂಪು
ಚಂದ್ರನ ತೆಕ್ಕಿಗಿದೆ ತಂಪು
ನಿಮ ಕಂಡರ ಕವದಾವ ಜೊಂಪು ॥
ನೀವು ಹೊರಟಿದ್ದೀಗ ಎಲ್ಲಿಗೆ ?

ನೆರಳಲ್ಲಾಡತಾವ ಮರದ ಬುಡꣳಕ
ಕೆರಿ ತೆರಿ ನೂಗತಾವ ದಡಕꣳ
ಹೀಂಗ ಬಿಟ್ಟು ಇಲ್ಲಿ ನನ್ನ ನಡꣳಕ
ನೀವು ಹೊರಟಿದ್ದೀಗ ಎಲ್ಲಿಗೆ ?

ನಮ್ಮ ನಿಮ್ಮ ಒಂದತನದಾಗ
ಹಾಡು ಹುಟ್ಟಿ ಒಂದು ಮನದಾಗ
ಬೆಳದಿಂಗಳಾತು ಬನದಾಗ
ನೀವು ಹೊರಟಿದ್ದೀಗ ಎಲ್ಲಿಗೆ ?

ನಾವು ಬಂದೆವಲ್ಲಿಂದಿಲ್ಲಿಗೆ
ಬಾಯಿ ಬಿಟ್ಟವಲ್ಲ ಮಲ್ಲಿಗೆ
ನೀರೊಡೆದಿತಲ್ಲ ಕಲ್ಲಿಗೆ ॥
ನೀವು ಹೊರಟಿದ್ದೀಗ ಎಲ್ಲಿಗೆ

ಬಂತ್ಯಾಕ ನಿಮಗ ಇಂದ ಮುನಿಸು
ಬೀಳಲಿಲ್ಲ ನಮಗ ಇದರ ಕನಸು
ರಾಯಾ ತಿಳಿಯಲಿಲ್ಲ ನಿಮ್ಮ ಮನಸು ॥
ನೀವು ಹೊರಟಿದ್ದೀಗ ಎಲ್ಲಿಗೆ ?

# ಗೆಳತಿ

ಅ ನಾನೊ ! ಆ ನೀನೊ !
ಎಂದು ಕೂಡಿದೆವೇನೊ !
ಈ ನಾನು ಈ ನೀನು
ಈಗ ಆಗಿ
ಇದಿರು ಬದಿರಿಗೆ ಬಂದು
ಸ್ಮಿತ ವಿಸ್ಮಿತದಿ ನಿಂದು
ಬಿಂಬ ಪ್ರತಿಬಿಂಬದೊಲು ಕಂಡೆವೇನೋ ?
ಏನ ಕಂಡೆವೊ ಏನೊ
ಮನ ನೆನೆಯುತಿದೆ ಏನೊ
ಕಣಸು ಏನೇನೊ ಮೂಡುತ್ತಲಿಹವು
ಕಣಸೋ ಕನಸೋ ಕಾಣೆ
ನೀನೊ ಅದ್ಭುತ ಜಾಣೆ
ಮುಟ್ಟದೆಯೆ ಮುರುಕ ತೋರಿಸಿದ ವೀಣೆ.

ಮೌನ ಕಂಪಿಸುತಿರಲು
ಸುಪ್ತಿ ಜೊಂಪಿಸುತಿರಲು
ಬಯಲ ಬಸಿರಲಿ ನೀರು ಉರಿದೆದ್ದಿತು
ತಿಂಗಳನ ಚುಕ್ಕಿಯೋ
ಅಹುದೇಕೆ ನಕ್ಕಿಯೋ
ಗ್ರಹಮಾಲೆಯನೆ ನೀನು ಹೆಣೆಯುತಿರುವೆ
ಯಾವ ಗಿಳಿಯೋ ಅಳಿಯೊ
ಗಳಪಿ ಗುಂಗುಣಿಸಿತೋ
ಕೂ ಹೂ ಹು ಹೂ ಹೂ ವು ಕುಕಿಲುತಿರಲು
ಮಾವು ಹೂವಾಗಿತ್ತು.
ಬೇವು ಸವಿಯಾಗಿತ್ತು.
ಕಣ್ಣು ಹುಬ್ಬು ಕೂಡಿ-ಕುಣಿಯುತಿತ್ತು.

# ಹೂ–ಊಂಹೂ

ಕೂಹೂ ಕೂಹೂಽ ಕೂಹೂ
ಮೈತುಂಬ ಮಾವು ಹೂಽ ಹೂಽ
ಒಳಹೊರಗು ಹೂತೆವೇ ನಾವ್ಹೂಽ
ನೀವ್ಹೂಽ
ಕೂಹೂಽ—

ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜ ಬಿತ್ತಿಽಽ
ಮಧುಚಂದ್ರನ ಸ್ವಪ್ನವನೆತ್ತಿಽ
ಸುಳಿದಾಡುತಿತ್ತು ಸುತ್ತೂಽ
ತುತ್ತೂ ತುತ್ತೂ ತುತ್ತೂ
ಬರಿ ಮುತ್ತೇ ಮುತ್ತೇ ಮುತ್ತೂ.

ಬಾವೂ ಬಾವೂ ಬಾವೂ
ಮೈತುಂಬ ಉರಿವ ಕಾವೂ
ಮಾವಾಯಿತು ಯಾವುದೊ ಬೇವು.
ಅದೆ ಇದ್ದರು ನಾವೂ ನೀವೂ
ಬಾಳಾಗಿದೆ ಬದುಕಿನ ಸಾವು
ಥೂ ಥೂ ಥೂ ಥೂ
ಹುಳುಹುಳುಕು ತೂತು ಮಾತೂ
ಓಹೋ ಹೊ ಏನೋ ನೋವು
ಕೂಹೂ —

ಬುಸುಗುಡುತಿದೆ ಸುತ್ತುಮುತ್ತೂ । ಹಾವೂ
ಅಣಗಿಸುತಿವೆ ಒಣಗಿದ ಹೂವು
ಎಲ್ಲಿರುವುದು ಆಗಿನ ಹೂಹೂ
ಊಂಹೂಽ ಊಂಹೂಽ ಊಂಹೂಽ

## 'ಕನ್ಯಾರತ್ನ'

ಮೌನದಲಿ ಮಲಗಿತ್ತು ಅವಳ ಪ್ರೀತಿ
ಮಾತಿನಾ ಹದವಿತ್ತು ಗದ್ಯರೀತಿ
ಆಕೆಗೊಲಿದಿರಲಿಲ್ಲ ಹೃದ್ಯಗೀತಿ.

ಹೂ ಮೊಗ್ಗಿನಂತಿತ್ತು ಅವಳ ನೋಟ
ಹಿಗ್ಗಿ ಅರಳಿರಲಿಲ್ಲ ಆದರ ಮಾಟ
ಬಯಲಾಟವೆನಿಸಿತ್ತು ಭಾವಕೂಟ.

ಪುಲಕ ಮುಳ್ಳೆನಿಸಿತ್ತು ಮೃದುಹೃದಯದಲ್ಲಿ
ಅಧರವದಿರಿರಲಿಲ್ಲ ತಾ ವಿನಯದಲ್ಲಿ
ಭಯದ ಮುದ್ರೆಯೆ ಇತ್ತು ಸಹಜ ನಯದಲ್ಲಿ.

ಮಿಸಲಳಿದಿರಲಿಲ್ಲ, ಮೂಸಿ ಮಾಸಿರಲಿಲ್ಲ
ಸಾಸಿರದೊಳೊಂದು ಈ ರತ್ನಕನ್ಯೆ
ಜೀವನ ಸಮಾಧಿಯೊಳು ತಾನನನ್ಯೆ

# ಕೃಷ್ಣಾಕುಮಾರಿ

ಹೋದ ಶತಮಾನದಾದಿಯಲ್ಲಿ ಬಾಪ್ಪಾ ರಾವಳನ ವೀರವಂಶದ ಕೊನೆಯ ರಾಣಾ ಭೀಮಸಿಂಹನು ಉದಯಪುರದ ಸಿಂಹಾಸನದ ಮೇಲೆ ಅಸ್ತಮಾನ ಸೂರ್ಯನಂತೆ ಕಂಗೊಳಿಸುತ್ತಿದ್ದನು. ರಜಪೂತ ರಮಣಿಯರ ಲಾವಣ್ಯಲತೆಗೆ ಬಿಟ್ಟ ಒಂದೇಒಂದು ಹೂವಿನಂತಿರುವ ಕೃಷ್ಣಾಕುಮಾರಿಯು ಲಾವಣ್ಯಪರಿಮಳ ದಿಂದ ದಿಕ್ಕುದಿಕ್ಕಿನ ರಾಜಮಧುಪರ ಮನಸು ಭ್ರಮಿಸಹತ್ತಿತ್ತು. ಇವಳ ತಂದೆಯಾದ ಭೀಮಸಿಂಹನು ಈ ಲಾವಣ್ಯಲಕ್ಷ್ಮಿಯನ್ನು ಜೋಧಪುರದ ಭೂ-ಲಕ್ಷ್ಮೀವಲ್ಲಭನಾದ ಯೋಧಾಗ್ರಣಿಗೆ ಕೊಡಬೇಕೆಂದು ಮೊದಲೇ ಗೊತ್ತುಮಾಡಿದ್ದನು, ಮತ್ತು ಇವನನ್ನೇ ಕುಮಾರಿಯು ಪ್ರೀತಿಸುತ್ತಿದ್ದಳು. ಆದರೆ ವಿಧಿಯು ಮಾತ್ರ ಬೇರೆ ವಿಧವಾಗಿ ಗೊತ್ತುಮಾಡಿದ್ದನು.

ಅಕಸ್ಮಾತ್ತಾಗಿ ಈ ಜೋಧಪುರದರಸನು ಸಾಯಲು, ಅನೇಕ ಅರಸರ ಮನಸ್ಸಿನಲ್ಲಿ ಮನಸಿಜನ ದಾಳಿಯೆದ್ದಿತು ; ತಂದೆಯ ಚಿತ್ತದಲ್ಲಿ ಚಿಂತೆಯ ಸಂತೆ ನೆರೆದಿತು ; ಕುಮಾರಿಯ ಅಂತಃಕರಣಕಾಸಾರವು ಕದಡಿ ಕಲಕಾಯಿತು. ಜಯ ಪುರದ ಜಗತ್ಸಿಂಹನು ಖಡ್ಗಧಾರಿಗಳೊಡನೆ ಪ್ರಣಯಪತ್ರಿಕೆ ಕಳಿಸಿ ಭೀಮ ಸಿಂಹನಿಂದ ಒಪ್ಪಿಗೆಯನ್ನು ಪಡಕೊಂಡನು. ಜೋಧಪುರದರಸನ ತರುವಾಯ ಅವನ ಭೂಲಕ್ಷ್ಮಿಗೆ ಒಡೆಯನಾದ ತಾನು ಸ್ತ್ರೀಲಕ್ಷ್ಮಿಗೂ ಒಡೆಯನೆಂದು ಬಗೆದು ಮಾನಸಿಂಹನು ಕುಮಾರಿಗೆ ತಾನೇ ವರನೆಂದು ಹೇಳಿ ಕಳಿಸಿದನು. ಅವಾಸ್ತವ ಮಹತ್ವಾಕಾಂಕ್ಷಿಯಾದ ಸಿಂಧಿಯನು ಯಾವ ಕುಟಿಲ ನೀತಿ ಗಾಗಿಯೋ ಮಾನಸಿಂಹನ ಹಂಬಲಕ್ಕೆ ಬೆಂಬಲ ಕೊಟ್ಟು, ಭೀಮಸಿಂಹನನ್ನೂ ಜಗತ್ಸಿಂಹನನ್ನೂ ಸೋಲಿಸಿದನು. ಭೀಮಸಿಂಹನು ಕಿಂಕರ್ತವ್ಯತಾಮೂಢ ನಾದನು. ಜಗತ್ಸಿಂಹ-ಮಾನಸಿಂಹ ಇವರಿಬ್ಬರೊಳಗೆ ಕಾಳಗವೆಸಗಿ, ಇಬ್ಬರೂ ಅಂತಃಕಲಹಗಳಿಂದ ಜರ್ಜರಿತರೂ, ಭಗ್ನದರ್ಪರೂ ಆಗಿ, ನಂದಿದಂತಾಗಿ ದ್ದರು. ಆದರೆ ರಜಪೂತ ಸ್ಥಾನದಲ್ಲಿ ಹೋಳೀಹುಣ್ಣಿಮೆಯನ್ನು ಸಾಂಗವಾಗಿ ಮಾಡಬೇಕೆಂದು ಸಂಕಲ್ಪ ಮಾಡಿಕೊಂಡ ವಿಧಿಯು ಇದೇ ಕಾಲಕ್ಕೆ ಅಮೀರ ಖಾನನೆಂಬ ಒಂದು ಕೊಳ್ಳಿಯನ್ನು ಅಲ್ಲಿಗೆ ಕಳಿಸಿಕೊಟ್ಟನು.

ಕಟುಕರವನ ಕಟಾರಿಯನ್ನು ಕಂಡು ಕುರಿಗಳು ಭೀತಗ್ರಸ್ತವಾಗುವಂತೆ ರಜಪೂತರು ಇವನನ್ನು ಕಂಡು ವೀರ್ಯಹೀನರಾದರು. ಕೃಷ್ಣಾಕುಮಾರಿಯು ಸತ್ತ ಹೊರತು ಗತಿಯಿಲ್ಲವೆಂದು ಮನದಟ್ಟಾಯಿತು. ಹೆಂಗಸರನ್ನು ಕೊಲ್ಲುವ ಗಂಡಸರಾರೂ ಕತ್ತಿಯನ್ನೆತ್ತಿ ಮುಂದರಿಯದ್ದರಿಂದ, ವಿಷಕ್ಕೆ ಈ ಕಾರ್ಯ

ವನ್ನು ಮಾಡಬೇಕಾಯಿತು. ವಿಶದಂಥ ವಿಷವು ಕೂಡ ಮೂರು ಸಲ ಹಿಂಜರಿಯಿತು. ನಾಲ್ಕನೇ ಸಲ ನಿರುಪಾಯವಾಗಿ ಅದು ಅವಳನ್ನು ಕಾಳ ನಿದ್ರೆಗೈಯುವಂತೆ ಮಾಡಿತು.

ಅಂದು ಅಮಾವಾಸ್ಯೆಯಾಗಿತ್ತು. ಚಿಕ್ಕೆಗಳಿಗೂ ಕೂಡ ಈ ನೋಟವು ಅಸಹ್ಯವಾದೀತೆಂದು, ರಾತ್ರಿಯು ಕಾರ್ಮೋಡಗಳಿಂದ ಮುಗಿಲನ್ನು ಬಾಸಣಿಸಿತ್ತು. ಆ ತೆರೆಯ ಹಿಂದೆ ಮೇಳಗೂಡಿ ಚಿಕ್ಕಗಳೆಲ್ಲ ಸೌಂದರ್ಯಶಕ್ತಿಯನ್ನು ಕುರಿತು ಇಂತು ಪಾಡಿದವು :

ಸೌಂದರ್ಯವೆಂಬ ಕಟುವಿಷವೆ ಪೀಯೂಷವೇ ! ।
ಸೌಂದರ್ಯವೆಂಬ ಮೃತಗರ್ಭ ಬೇವೇ ಮಾವೆ ! ।
ಸೌಂದರ್ಯವೆಂಬ ರತ್ನವ ಹೆಡೆಯೊಳಿಟ್ಟಿರುವ ಹಾವೆ,
ಸುರವಂದ್ಯ ಆವೇ ! ॥
ಅಂದವಾದಷ್ಟು ಐಸಿರಿಯ ಪೊಂದಿದ್ದು, ಬಲು ।
ಚಿಂದವಾಗಿರುವ ಮೈಸಿರಿಯ ಪಡೆದಿರುವ, ಮದ- ।
ದಿಂದಂಧವಾದ ಕಾಮುವ ಕೊಂದು ಹೆಸರಾದ
ಸೌಂದರ್ಯವೆಂಬ ಸಾವೇ ! ॥ ೧ ॥

ಸೌಂದರ್ಯವೆಂಬ ಸಾವೆ ! ನಿನಗೆ ನನ್ನ ಅನಂತ ಪ್ರಣಾಮಗಳು.

* * *

ವಿಷದ ಮೊದಲನೆಯ ಬಟ್ಟಲನ್ನು ಎತ್ತುವಾಗ, ಅನಪೇಕ್ಷಿತದಾದ ಈ ಅಮಾನುಷ ಪ್ರಸಗದಿಂದ ಹೊಟ್ಟೆಯೊಳಗೆ ಕಲಕಲವೆದ್ದು, ತಮೋವಿಕಾರಗಳು ಪ್ರಬಲವಾಗಲು, ಕುಮಾರಿಯು ಇಂತೆಂದಳು :

ಛೀ ನನ್ನ ಜನ್ಮವೇ, ಛೀ ನನ್ನ ಬಾಲ್ಯವೇ, ।
ಛೀ ನನ್ನ ಯೌವನವೆ, ಛೀ ನನ್ನ ಹೆಣ್ತನವೆ, ।
ಛೀ ನನ್ನ ಬಾಳ್ವಿಕೆಯೆ, ಛೀ ನನ್ನ ಚೆಲ್ವಿಕೆಯೆ,
ನನ್ನ ಸುಡುಗತೆಯೆ ಛೀ ! ಛೀ ! ॥
ಥೂ ನಾರಿಯರ ಮಾರಿತನದ ಮೋರೆಯ ಗುಣಕೆ, ।
ಥೂ ನರರ ಬೆದಿಗುದಿಗೆ ಷಂಡಗಂಡಸುತನಕೆ. ।
ಥೂ ನರಕಸಮ ಜಗಕೆ, ಗತ ವೀರ್ಯಹತ ಜನಕೆ,
ಥೂ ರಾಜಪುತ್ರಕುಲಕೆ ! ॥ ೨ ॥

ಸೌಂದರ್ಯವಿಂದು ಜಗದಲ್ಲಿ ಕುಂಟಣೆಯಾಯ್ತು, ।
ಬಾಂಧವ್ಯವಿಂದು ಬಹು ಪಾಪಬಂಧನವಾಯ್ತು, ।
ಗಂಧವಿಲ್ಲದದಾಯ್ತು, ಚೆಂದವಿಲ್ಲದದಾಯ್ತು
ಜನರಲ್ಲಿ ಗಂಡುತನವು ! ॥

ಹಿಂದಿದ್ದ ಗುಣವು ಸೌಂದರ್ಯದಲ್ಲಿಲ್ಲಾಯ್ತು, ।
ಹಿಂದೆ ಹೆಣ್ತನಕಿದ್ದ ಮಾನವಿಂದಿಲ್ಲಾಯ್ತು, ।
ಇಂದು ಸಂಸಾರವಿದು ಸುಡುಗಾಡ ಸಮವಾಯ್ತು,
ಶವವಾಯ್ತು ಜೀವಕೋಟಿ ! ॥ ೩ ॥

ನಿಟ್ಟುಸುರು ಬಿಟ್ಟೆನ್ನ ಕೆಂದುಟಿಗಳಿದೆಂತು ।
ಸುಟ್ಟಿರುವವಂತು ಸುಡಲೀ ರಾಜಕುಲದ ಯಶ ; ।
ಹೊಟ್ಟೆಯೊಳು ಸೇರಿ, ಪಂಚಪ್ರಾಣಗಳ ಹೀರಿ,
ಮೈಮೇರೆಯನ್ನು ಮೀರಿ, ॥

ಕಟ್ಟಿ ಜೀವವನ್ನೊಯ್ಯುತಿರುವ ಈ ವಿಷದಂತೆ ।
ಕುಟ್ಟು ತೊಯ್ಯಲಿ ನಿಮ್ಮ ವೀರ್ಯವಂ, ಶೌರ್ಯವಂ, ।
ಬಿಟ್ಟುಬಿಡದೆನ್ನ ನಿಷ್ಪಾಪಕುವರಿಯ ಶಾಪ
ಶ್ರೀರಾಮಚಾಪದಂತೆ ! ॥ ೪ ॥

ವೀರಲಕ್ಷ್ಮಿಯೇ ಹೊರಗೆ ಹೋಗು ರಾಜಸ್ಥಾನ ।
ಶೂರಧೀರರದಲ್ಲ ; ವಿಜಯಲಕ್ಷ್ಮಿಯೆ ಹೊರಡು, ।
ಪಾರಾಗಿ ಹೋಗು ಶ್ರೀಲಕ್ಷ್ಮಿ ಇಲ್ಲಿಂದ ನೀ
ನಿನ್ನ ಅಕ್ಕಂದಿರೊಡನೇ ! ॥

ಯಾರಿರುವರೆಂದು ಇಲ್ಲಿರುವಿ ವಿದ್ಯಾಲಕ್ಷ್ಮಿ ? ।
ತೀರದವು ಗುಣ, ತೊಲಗು ಸೌಭಾಗ್ಯಲಕ್ಷ್ಮಿಯೇ ! ।
ನಾರಿಯರು ನೀವೆಲ್ಲರಲ್ಲವೇ ? ನಿಲ್ಲುವಿರೆ
ಸ್ತ್ರೀಮಾನಭಂಗವಾಗಿ ? ॥ ೫ ॥

ಕೃಷ್ಣಪಕ್ಷದ ಕೃಷ್ಣತರ ರಾತ್ರಿಯೇ ! ನೀನು ।
ಕೃಷ್ಣತಮವಾದ ಈ ಕೃಷ್ಣೆಯಂ ನುಂಗಿನ್ನು ।
ಕೃಷ್ಣಮುಖವಂ ತೆರೆದು, ಕೃಷ್ಣಮಯವಾದಂಥ
ಮರಣಲೋಕಕ್ಕೆ ಕಳಿಸೇ ! ॥

ಕೃಷ್ಣಹುಣ್ಣಿಮೆಯ ಚಂದ್ರಮುಖಿಗಿ ರಜಪೂತ
ಕೃಷ್ಣಕೀರ್ತಿಯನೊಮ್ಮೆ ಕಣ್ದನಿಯೆ ನೋಡುತ್ತ ।
ಕೃಷ್ಣಾರ್ಪಣಂ ಎಂದು ತೃಷ್ಣೆ ತೀರಿದ ಕೃಷ್ಣೆಯುಳ
ಭೂತ ಸಾಯುಜ್ಯದಂದು ॥ ೬ ॥

ಮೊದಲನೇ ಬಟ್ಟಲವು ಪ್ರಾಣಾಗ್ನಿಗೆ ಆಹುತಿಯಾಗಲು ಮುಂದೆ ತಂದಿಡಲ್ಪಟ್ಟ ಎರಡನೇ ಬಟ್ಟಲವನ್ನೀಕ್ಷಿಸಿ, ರಾಜಸಾಂತಃಕರಣದಿಂದ ರಾಜಪುತ್ರಿಯಿಂತೆಂದಳು :

ಮಾನಹಾನಿಯೆ. ಮರಣವೆಂದು ಮಾನವರೆಲ್ಲ ।
ಮಾನಿಸುತ್ತಿರಲು, ಮಾನಿನಿಯು ಮೇಲಾಗಿ ನಾ ।
ಪಾನವಂಗೈದು ವಿಷ, ಬದುಕಿರುವೆನೇತಕೋ ?
ಛೀ ಮಾನಗೇಡಿ ಜೀವಾ ! ॥
ಮಾನ ವೃತವಾಗಿರಲು ನಾನಿದ್ದು ಫಲವೇನು ? ।
ನೀನಿದನು ತಿಳಿಯದಾದೆಯೆ ಕೃಷ್ಣೆ ಮೂಢಳೇ ? ।
ಮೌನವಿನ್ನೇತಕ್ಕೆ ? ಮತ್ತೊಮ್ಮೆ ಬಂದಿರುವ
ಬಟ್ಟಲವನೆತ್ತು ಬೇಗ, ॥ ೭ ॥

ರಾಜಪುತ್ರರ ರಾಜರೆಂದು ಬಲು ಹೆಸರಾದ ।
ರಾಜಲಕುಜಲಧಿಯಲಿ ರಾಜನಂತುದಯಿಸಿದ ।
ರಾಜಪುತ್ರಿಯು ನಾನು, ರಾಜೀವಕುಲದ
ಕುಲದೈವತದ ಹಾಗೆ ಬೆಳೆದು, ॥
ರಾಜಮುಖವೆನಗೆ ನೀರಾನವದಾಗಲಾ ।
ಸೌಜಸೌಭಾಗ್ಯದಿಂ, ನಿರ್ವ್ಯಾಜಭಾಗ್ಯದಿಂ ।
ರಾಜಿಸಿದೆ ನಿನ್ನೆವರೆಗೆಂದು ವಿಧಿ ಯೋಜಿಸಿದನೇನು
ದುರ್ಭಾಗ್ಯವನ್ನು ? ॥ ೮ ॥

ಮಿಂಚುಗಳು ನನ್ನ ಮೈಸಿರಿಯ ಮಿಂಚಿನ ಮುಂದೆ ।
ಮಿಂಚುಬುಳುಗಳ ಹಾಗೆ ಹಿಂಚಿ ಹೋಗುವವೆಂದು ।
ಮುಂಚೆ ನಗೆಯೊಳಗೆಂದ ಮಾತುಗಳ ನೆನಪಿಟ್ಟು
ಮುಗಿಲಿನೊಳಗಿಂದ ಬಂದು

ಮಿಂಚುಗಳ ಬಳಗ ಕಣ್ಣ್ಪುಟಿ ಕೊರಚುವುದೆನ್ನ ; ।
ಮಿಂಚಿಹೋದದ್ದನ್ನು ಚಿಂತಿಸುವದೇಕಿನ್ನು ? ।
ಸಂಚಿತದೊಳಿದ್ದುದನು ವಂಚಿಸುವರಾರೀ
ವಿರಿಂಚಿಯ ಪ್ರಪಂಚದಲ್ಲಿ ? ॥ ೯ ॥

ರಣದಲ್ಲಿ ಮನದಲ್ಲಿ ಬೀಸುವದು ಬಿರುಗಾಳಿ ।
ರಣದಲ್ಲಿ ಕಿವಿಯಲ್ಲಿ ಕೂಗುವದು ರಣಗಾಳಿ ।
ರಣದಲ್ಲಿ ಲಾಸ್ಯತಾಂಡವವಾಡುವರು ಕಾಳಿ-
ರುದ್ರ ರೌದ್ರವನು ತಾಳಿ ; ॥

ರಣದಲ್ಲಿ ಚಿತೆಯಲ್ಲಿ ಹಾರಲ್ಕೆ ಜೀವವೀ ।
ಕ್ಷಣದಲ್ಲಿ ಸಿದ್ಧವಿದೆ - ಕೊಂಡುಕೊಳ್ಳುವೆನೆಂದು ।
ರಣಹೇಡಿ ಮನಹೇಡಿ ಕುಲದಿ ಜನಿಸಿದೆನು
ರಿಣಪಾಶ ಹರಿಯಲೆಂದು ! ॥ ೧೦ ॥

ಪೂರ್ವಜನ್ಮದ ಪಾಪವೋ ಪುಣ್ಯವೋ ಇಂದ- ।
ಪೂರ್ವತೆರದಿಂ ಫಲಿತವಾಯ್ತು, ಭೋಗಿಸಬೇಕು ।
ಸರ್ವವನ್ನೇನ್ನಿದ್ದರೂ, ಈಗ ಸಿಹಿ ಮಾಡಿಕೊಳ್ಳುವದು
ಪ್ರಾಪ್ತವಾಯ್ತು ॥

ಓರ್ವರಾ ಪಾಪ ಮತ್ತೋರ್ವರಿಗೆ ಬಡಿಯುವದೆ ? ॥
ಜೀರ್ವರಂ ಬೈದೇನು ? ಶೋಕವಂ ಗೈದೇನು ? ।
ಮಿರ್ವರಾರ್ಕರ್ಮಫಲ ? ಗರ್ವದಿಂದಿದಿರಾಗು
ಕ್ಷತ್ರಿಯ ಪ್ರೇಮಪುತ್ರೀ ! ॥ ೧೧ ॥

ಎರಡನೇ ಬಟ್ಟಲವು ಪ್ರಾಣಶಕ್ತಿಗೆ ತೀರ್ಥವಾಗಲು, ಮುಂದೆ ತಂದಿಡಲ್ಪಟ್ಟ ಮೂರನೇ ಬಟ್ಟಲವನ್ನೆತ್ತಿ, ಸಾತ್ವಿಕ ಬುದ್ಧಿಯ ಪ್ರವೃತ್ತಿಯಾಗಲು, ಸತ್ವಶೀಲಳಾದ ಕೃಷ್ಣೆಯು ಇಂತೆಂದಳು :

ಮೃತ್ಯುಲೋಕದ ಜನರು ಕೆಳಗಿನಿಂದೊತ್ತುವರು, ।
ಮೃತ್ಯು ಸಾಕ್ಷಾತ್ತಾನು ಮೇಲೆ ನಿಂದೊತ್ತುವದು ।
ಇತ್ತಿಲ್ಲ ಅತ್ತಿಲ್ಲ ಎತ್ತ ಹೋಗುವದೆಂದು
ಜೀವವತ್ತಿತ್ತ ನೋಡಿ, ॥

ಅತ್ತತ್ತು ಸುಮ್ಮನಾಗಿರುವ ಕೂಸಿನ ಹಾಗೆ ।
ಸತಂತೆ ಬಿದ್ದಿಹುದು, ಎತ್ತಿಕೊಂಡೊಯ್ ಸಾವೆ ! ।
ಸತ್ಯವಿದು, ಸತ್ಯವಿದು, ಸತ್ಯವಿದು ! ಸಾಯುವೆನು
ಆತ್ಮಸಂತೋಷದಿಂದ ॥ ೧೨ ॥

ಜನಕನೇ, ಜನನಿಯೇ, ಜನ್ಮಭೂಮಿಯೆ, ಪ್ರಜಾ- ।
ಜನರೆ, ನಿಮ್ಮಾ ಮಗಳು ನಿಮ್ಮ ನೆಮ್ಮದಿಗಾಗಿ ।
ತನುಮನದ ಪ್ರಾಣವನ್ನೊಪ್ಪಿಸಲು ನಿಂತಿಹಳು
ತಾನು ವಿಧಿಬದ್ಧಳಾಗಿ ॥

ಮನದಿ ವಚನದಿ ತಪ್ಪು ಮಾಡಿದ್ದರೆನ್ನನು ।
ವನಿತೆ, ಕುಮರಿಯು, ಮಗಳು, ಮರಣಮೂಢಳು ಎಂದು ।
ಮನದಿ ತಿಳಿಯುತ ಮನ್ನಿಸುವದು ; ಪಾಪಿಯೆನೆನ್ನ-
ನಾಮೇಲೆ ಮರೆಯಬೇಕು ॥ ೧೩ ॥

ವೀರಸ್ವರ್ಗವನೇರಿದಂಥ ವೀರರ ಕೂಡ ।
ವೀರಪದವಂ ಪಡೆದ ವೀರಕೌಮಾರಿಯರೆ, ।
ತೀರ ಹತಬುದ್ಧಳಾದೀ ಕುವರಿಯಂ ನೀವು
ಕೈ ನೀಡಿ ಕಾಯಬೇಕು ॥

ಯಾರು ಭೋಗಕ್ಕಾಗಿ, ಜೀವದಾಸೆಗೆ ಯಾರು ।
ಮಾರಿಕೊಳ್ಳರೊ ತಮ್ಮ ಪಾವಿತ್ರ್ಯವನ್ನಂಥ ।
ನಾರಿಮಣಿಯರೆ ತೋರಿರೆನಗೆ ಮೇಲಿನ ಹಾದಿ
ಹೊರಟೆ ಭೂಲೋಕ ಬಿಟ್ಟು ॥ ೧೪ ॥

ಹುಳಿತ ಹೃದಯದ ಕಾರ್ಯವಿದು ಗುಪ್ತವಿರಲಿ ! ಕಡು- ।
ಕೊಳೆತೆದೆಯ ಕೃತ್ಯವಿದು ಲುಪ್ತವಾಗಲಿ ! ಮತ್ತೆ ।
ಹುಳಿತ ಕಾಮದ ಹೊಲಸುನಾತ ಮರಣದ ನಾತ
ಸುಪ್ತವಾಗಿರಲಿ ಮನದಿ ॥

ಹಳೆಯದಾದರು ಜನರ ಮನವು ಮರೆಯದ ಕಥೆಯು ।
ಬೆಳೆಯದಾದರು ನಿತ್ಯ ಸತ್ಯವಿದ್ದೀ ಮಾತು ।
ಕಳೆದುಹೋಗಲಿ ಕಾಳರಾತ್ರಿ ಈ ಕಾಳು ವಿಷ
ಕಾರೊಡಲ ಹಾಳಿನಲ್ಲಿ ॥ ೧೫ ॥

ಏಕಲಿಂಗನೆ! ನೀಲಕಂಠನೇ! ಸ್ವಾಮಿಯೇ! ।
ಏಕೆ ತಡ! ನೀ ತಡೆಯದೀ ವಿಷವ ಕುಡಿದಳ್ಳೆ ।
ಏಕಭಾವದಿ ನಿನ್ನ ಹಸುಮಗಳು ಪಶುಪತಿಯೆ
ಕಾಳಪಾಶವನು ಹಾಕಿ ॥
ಜೋಕೆಯಿಂದೊಯ್ ಪ್ರೇಮಪಾಶ ಸಲಹುವ ಹಾಗೆ ।
ಸಾಕಿನ್ನು ಸಾಕಿನ್ನು ಮಾಡಬೇಕಾದುದಂ-
ತಃಕರಣಶುದ್ಧಿಯಿಂ ಚರಣದಲ್ಲರ್ಪಿಸಿದೆನೀ
ಶರಣ ಜೀವವನ್ನು ॥ ೧೬ ॥

ಮೂರನೆಯ ಬಟ್ಟಲವು ಪ್ರಾಣೇಶ್ವರನಿಗೆ ಪ್ರಸಾದವಾಗಲು, ಅಂತರ್ಮುಖ ಳಾಗಿ ನಿಸ್ತ್ರಿಗುಣಳಾಗಹತ್ತಿದ ಬಾಲೆಯು ಇಂತೆಂದಳು :

ಮೊಲೆಯ ಹಾಲನು ಕುಡಿಸಿ ಮಮತೆಯನ್ನುಣ್ಣಿಸಿದ ।
ಮೊಲೆಯ ಹಾಲಿನ ಕೂಡ ಮೈಯೆಲ್ಲ ಬಣ್ಣಿಸಿದ ।
ಮೊಲೆಹಾಲಿನೊಡನೆ ಸರ್ವವನು ಹಣ್ಣಿಸಿದಂಥ
ದೇವಸ್ವರೂಪ ತಾಯೆ! ॥
ಎಲೆ ಮಾತೆ, ನಿನ್ನ ಮೊಲೆಯುಂಡು ನಿನ್ನಂತನ್ಯ ।
ಕುಲದ ಮಾತೆಯು ಆಗಿ ರಿಣವ ತೀರಿಸಲಿಲ್ಲ ।
ಬೆಲೆಯಿಲ್ಲದಂಥ ನನ್ನಿಗೆ ನನ್ನ ಒಂದನೇ
ಪ್ರಾಣವನ್ನರ್ಪಿಸುವೆನು ॥ ೧೭ ॥

ಮೊದಲನೇ ಮುದ್ದು, ಮೊದಲೆನ್ನ ಗದ್ದವ ಪಿಡಿಯೆ ।
ಮಿದುವಾದ ಸ್ಪರ್ಶದಿಂ ಮೈಮನಸು ನಡುನಡುಗೆ ।
ಮುದವಾಗೆ ತಪವೀರಹಾಸ್ಯದಿಂ ಮಾಲಿಸಿದ
ದೈವಸ್ವರೂಪ ತಂದೇ! ॥
ತೊದಲಿನಲ್ಲಿಯು ಕೂಡ ಮೊದಲು ನುಡಿಯಲು ಬಂದ ।
ಹೃದಯದಲ್ಲಿಯು ಕೂಡ ಭಿನ್ನವಾಗಿಯು ನಿಂದ ।
ಬದಲಿಲ್ಲದಂಥ ನಿಷ್ಕಾಮಕ್ಕೆ ಎರಡನೇ
ಪ್ರಾಣವನ್ನರ್ಪಿಸುವೆನು ॥ ೧೮ ॥

ನಿನ್ನ ನೀರಿನ ಕೂಡ ನಿನ್ನ ಕಾಳಿನ ಕೂಡ ।
ನಿನ್ನ ಕಥೆಗಳ ಕೂಡ ನಿನ್ನ ಹಾಡಿನ ಕೂಡ ।
ನಿನ್ನ ಧರ್ಮವ ಹೊತ್ತ ಬೆಟ್ಟಸಾಲಿನ ಕೂಡ
ಸ್ವರ್ಗಸ್ವರೂಪ ನಾಡೇ ! ॥
ನನ್ನ ಮೈಯೊಳು ವೀರ್ಯ ನನ್ನ ಮನದೊಳು ಧೈರ್ಯ ।
ನನ್ನಂತರಾತ್ಮದೊಳು ಸ್ಥೈರ್ಯ ನೆಲಸಿತು ನಾಡೆ ।
ನಿನ್ನನ್ನು ಮರೆಯುವೆವೆ ನಿನಗೆನ್ನ ಮೂರನೇ
ಪ್ರಾಣವನ್ನರ್ಪಿಸುವೆನು ॥ ೧೯ ॥

ಹೊಸ ಜನ್ಮದಂತೆ, ಯೌವನದ ಬರುವಿಕೆಯಂತೆ ।
ಹೊಸ ಸುಗ್ಗಿಯಂತನನುಭೂತ ಅನುಭವದಂತೆ ।
ಹೊಸ ಹೊಸಗೆಯಂತೆ ಹೊಸ ಚಂದ್ರನುದಯಿಸಿದಂತೆ
ಸತ್ಯಸ್ವರೂಪ ಪ್ರೇಮಾ ! ॥
ಹೊಸ ಲೋಕದೊಳು ಹೊಗಿಸುತೆನ್ನನೀ ಜಗವನ್ನು ।
ಹೊಸದಾಗಿಸುತ, ಜನರನೆಲ್ಲ ಹೊಸಗೈಯುತ್ತ ।
ಹುಸಿ ಹೋಗದೀ ನಿನಗೆ ನಾನೆನ್ನ ನಾಲ್ಕನೇ
ಪ್ರಾಣವನ್ನರ್ಪಿಸುವೆನು ॥ ೨೦ ॥

ಯಾವನನು ಕಂಡೊಡನೆ ಜೀವ ಚೇತನಗೊಂಡು ।
ಭಾವಭಕ್ತಿಯ ಪುಷ್ಪವಾಯಿತಾತ್ಮಾಸನದಿ ।
ಯಾವನನು ಕಂಡು ಒಡೆನರ್ಚಿಸಿತು ಅಂಥ
ಪರಮೇಶಸ್ವರೂಪ ಪ್ರಿಯನೇ ॥
ಯಾವನೆನ್ನನು ದಿವ್ಯಗತಿಯ ಸೋಪಾನವನು ।
ಜೀವಭಾವದ ಬೆರಳುಕೊಟ್ಟು ಹತ್ತಿಸಿದನೋ ।
ಆ ವರೆಗೆ ಈಶ್ವರಗೆ ಶಾಶ್ವತದಿ ಈ ಪಂಚ
ಪ್ರಾಣವನ್ನರ್ಪಿಸಿದೆನು ॥ ೨೧ ॥

ನಾಲ್ಕನೆಯ ಬಟ್ಟಲವು ಪಂಚಪ್ರಾಣದ ಪರಮೇಶ್ವರ ವಾಹನವಾಗೆ, ಜನರಲ್ಲಿ ಕೃಷ್ಣಾಕುಮಾರಿಯು ಸತ್ತಳೆಂಬ ಸುದ್ದಿ ಹರಡಿ, ಅಂತಃಕರಣದ ಅಧಿದೇವತೆಯಾದ ಕೃಷ್ಣೆಯ ತಾಯಿಯು ಹೀಗೆ ಪ್ರಲಪಿಸಿದಳು :

ಮುತ್ತಿಂದು ಮದಿರೆಯುಲಿ ಬಿತ್ತು, ಬಾಯಿಗೆ ಬಂದ ।
ತುತ್ತು ಹೊತ್ತಿತು, ಇಂದು ಸುರಕಲ್ಪವಲ್ಲರಿಯ ।
ಬಿತ್ತೊಡೆದು ಸತ್ತಿತೆನ್ನರಗಿಳಿಯು ಕುತ್ತಿಕೆಯ
ಕತ್ತರಿಸಿತಿಂದು ಕುತ್ತು ॥

ಹೊತ್ತುಹೊತ್ತಿಗೆ ಹೊತ್ತು ತಿಂಗಳಗಳಂತೆನ್ನ ।
ಚಿತ್ತವಂ ರಂಜಿಸಿದ ಚಿಕ್ಕೆ ಬಿತ್ತೆಲೆ ಬಿತ್ತು ।
ಬತ್ತಿತಯ್ಯೋ ಅಮೃತಬಂಧು-ಅಂತಃಕರಣ-
ದಾನಂದರಸದ ಸಿಂಧು ॥ ೨೨ ॥

ಬುದ್ಧಿಪ್ರಧಾನನಾದ ತಂದೆಯು ಹೀಗೆ ಹಳಿದುಕೊಂಡನು ;

ಹೊಟ್ಟೆಯುಲಿ ಬಂದಂಥ, ತೊಡೆಯ ಮೇಲ್ಬೆಳೆದಂಥ ।
ತಟ್ಟಿ ಮುದ್ದಿಸಿಕೊಂಡ ರಾಜಹಂಸಿಯುನಿಂದು ।
ಮೆಟ್ಟಿ ಬಂದುವು ಕಾಮಿ-ಕಾಗೆಗಳು ಮೂಲೆಯುಲಿ
ಕುಳಿತೆ ಮುದಿಗೂಬೆಯುಂತೆ ॥

ಕೆಟ್ಟೆನೈ, ನನ್ನ ಮಾಂಸವ ನಾಯಿನರಿಗಳೂ ।
ಮುಟ್ಟವೈ, ನಾ ಕೊಟ್ಟ ಪಿಂಡವನು ಪಿತೃಗಣವು ।
ಬಿಟ್ಟಿತೈ, ಪುಣ್ಯಕಣ ಸುಟ್ಟಿತೈ, ಪಾಪಗಣ
ಹುಟ್ಟಿತೀ ಸಾವಿನಿಂದ ॥ ೨೩ ॥

ಸ್ವಭಾವತಃ ಸತ್ವಪ್ರವೃತ್ತಿಯುಳ್ಳ ಜಗತ್ಸಿಂಹನು ಇಂತು ನಿರ್ವೇದ ಯುಕ್ತನಾದನು :

ಈಗ ಪ್ರೇಮದ ಕಮಲ ಕೆಸರನ್ನು ಕೂಡಿತೋ ।
ಈಗ ವೀರರ ಮನದಿ ಕಾಮವೇ ಮೂಡಿತೋ ।
ಈಗ ಭಯಭೀತಿಗಳ ಆಟವನು ಹೂಡಿತೋ
ವಿಧಿಯು ರಜಪೂತರಲ್ಲಿ ॥

ಈಗ ಪ್ರೀತಿಯ ಪಾತ್ರವನ್ನು ರಕ್ಷಿಸುವದೂ ।
ನೀಗದಂತಹ ಮೋಷಪಾತ್ರ ನಾನಾದೆನನು ।
ರಾಗಿ ಹೃದಯವೆ ! ರೋಗವೇಕೆ ? ಬೈರಾಗಿಯಾಗೀಗ
ಗಡ ಜೋಗಿಯಾಗು ॥ ೨೪ ॥

ರಜೋವಿಶಿಷ್ಟನಾದ ಮಾನಸಿಂಹನೂ ಇಂತು ಸಮಾಧಾನವನ್ನು ಹಚ್ಚಿ ಕೊಂಡನು ;

ಮಾನಸಿಂಹನ ಸಿಂಹದಂಥ ಅಭಿಮಾನವೇ ! ।
ಮಾನಾಪಮಾನಗಳ ಯುದ್ಧದಲಿ ಗೆದ್ದಿನೀ ।
ಮಾನಿನಿಯು ಸತ್ತರೇಂ ? ಮಾನವರು ಅತ್ತರೇಂ ?
ಹೀನಯಶ ಹೊತ್ತರೇನು ? ॥

ಮಾನವಂತರ ಮಗಳ ಮರಣಕ್ಕೆ ಕಾರಣನು ।
ನೀನಾದೆ ರಜಪೂತನಿದ್ದು - ಆದದ್ದಾಯ್ತು ।
ನೀ ನಿನ್ನ ನಯನದಿಂ ಕೊಂದಿ ಹರಿಣಾಕ್ಷಿಯನು
ಭಲೆ ಮಾನಸಿಂಹನಹುದೋ ! ॥ ೨೫ ॥

ತಮೋಗುಣಿಯಾದ ಮೀರಖಾನನು ಹೀಗೆ ಹೊಗಳಿಕೊಂಡನು :

ತೀರಿತೆನ್ನಯ ಆಟ, ಮೀರಿತೆನ್ನಯ ಬೇಟ ।
ಊರಿತೆನ್ನಯ ಭೀತಿ ರಜಪೂತರೆದೆಯಲ್ಲಿ ।
ಬೀರಿತೆನ್ನಯ ಬಿಂಕದಂಕ ಬಡಗಣ ನಾಡಿನಲ್ಲಿ,
ಶಂಕಿಸುವದೇನು ? ॥

ನಾರಿಮಣಿಯಳನಿಂದು ಯಾರಿಗಿಲ್ಲದ ಹಾಗೆ ।
ಮಾರಿದೇವಿಗೆ ಬಲಿಯಕೊಟ್ಟು ತಣಿಸಿದೆನವಳ- ।
ಮೀರಖಾನನು ಇಂದಮಾರ ಕೆಲಸವ ಮಾಡಿ
ಮೀರಿದನಮೀರನನ್ನು ॥ ೨೬ ॥

ಪರಾಂತಃಕರಣ ಪ್ರವೇಶವುಳ್ಳ ಕವಿಯು ತನ್ನ ಕಾವ್ಯನಾಯಿಕೆಯ ನಿರ್ಯಾಣ ಮಂಗಳವನ್ನಿಂತು ಹಾಡಿದನು :

ಪ್ರೇಮಲತೆ ! ಮೂರ್ತಿಮಾನ್ ಪ್ರೇಮಲತೆಯೆ ! ನಿನ್ನ ।
ಕಾಮ-ಲತೆಯೆಂದು ಕಾಮಿಸಿದರ್ ! ನಿನ್ನನ್ನು ।
ಹೋಮಿಸಿದರ್ ಕುಸುಮ ಸುಕುಮಾರ ಕುವರಿಯೇ !
ಕಾಮಾಗ್ನಿ ಹೋತ್ರದಲ್ಲಿ ॥

ಸೋಮಾನನೇ ! ಪದ್ಮ-ಪಾದ-ರಜ-ಪೂತರೀ ।
ಭ್ರಾಮಿಸಿದ ರಜಪೂತರೀಗ ಬೀಳಲಿಯೆಂದು ।
ನೇಮಿಸಿದನ್ ವಿಧಿಯು, ದೇವಭುಕ್ತಳಿದಾಗು
ಹೋಗು ಸೌಭಾಗ್ಯಭಾವೇ ! ॥ ೨೭ ॥

ಓಂ ಶಾಂತಿಃ ಶಾಂತಿಃ ಶಾಂತಿಃ

# ಹುದುಗಲಾರದ ದುಃಖ

ಹುದುಗಲಾರದ ದುಃಖ ಹುಗಿದಿರಿಸಿ ನಗೆಯಲ್ಲಿ
ನಸುನಗುತ ಬಂದೆ ಇದಿರು ;
ಇನಿತು ತಿಳಿಯದ ಮೂಢನೆಂದು ಬಗೆದೆಯೆ ನನ್ನ
ಇದು ಯಾವ ಊರ ಚದುರು ?

ಕೈಮುಟ್ಟಿ ಮೈಮುಟ್ಟಿ ನನ್ನ ಮನ ಸಂತೈಸ-
ಲೆಂದು ಬಗೆವವಳು ನೀನು,
ನಾನದನೆ ಬಯಸುತಿಹ ಸೊಗಸುಗಾರಿಕೆಯವನೆ
ನಾನೆದೆಯ ಕಟುಕನೇನು ?

ಮುಗುಳುನಗೆಯರಳಿಸುತ ಕರಿಯಾಲಿ ಹೊರಳಿಸುತ
ಸುಳ್ಳುಸುಖ ಮರೆಸಬಹುದೆ ?
ಮಮತಾಜಳನು ಹುಗಿದು ತಾಜಮಹಲನು ಕಟ್ಟಿ
ನಿಜದುಃಖ ಮರೆಸಬಹುದೆ ?

ಎಲೆಲೆ ಜೀವದ ಗೆಳತಿ ! ನನ್ನೆದೆಯ ಗುಡಿಯಲ್ಲಿ
ನೀನು ಆಟಮಾಟಿಸುತಿರಲು
ನಿನ್ನ ನಗೆ ಸುಖದ ಹೂವೆಂದು ತಿಳಿಯಲಿ ಹೇಗೆ
ಅಂತಿಂತು ನಟಿಸುತಿರಲು ?

# ನಗೀನವಿಲು

ನಾರೀ ನಿನ್ನ ಮಾರೀಮ್ಯಾಗ
ನಗೀನವಿಲು ಆಡತಿತ್ತ
ಆಡತಿತ್ತ ಓಡತಿತ್ತ
ಮುಗಿಲ ಕಡೆಗೆ ನೋಡತಿತ್ತ.

ಮಿನ ಮಿನ ಮಿನ ಮಿಂಚತಿತ್ತ
ಮೂಡತಿತ್ತ ಮುಳುಗತಿತ್ತ
ಮುಳುಗುತಿತ್ತ ತೊಳಗತಿತ್ತ
ನೆಲಾ ಜಲಾ ಬೆಳಗತಿತ್ತ.

ಕಣ್ಣಿನ್ಯಾಗ ಬಣ್ಣದ ನೋಟ
ತಕತಕ ಕುಣಿದಾಡತ್ತಿತ್ತ
ಕುಣೀತಿತ್ತ ಮಣೀತಿತ್ತ
ಒನಪಿಲೆ ಒನದಾಡತಿತ್ತ

ಮನದ ಮಾಮರದ ಕೊನಿಗೆ
ಕೋಕಿಲೊಂದು ಕೂಡತಿತ್ತ
ಕೂಡತಿತ್ತ ಹಾಡ ಬಿಟ್ಟು
ಬರೇ ನಿನ್ನ ನೋಡತಿತ್ತ.

ಒಂದು ಜೀವಾ ನೋಂದುಕೊಂಡು
ಹಗಲಿರುಳು ಮಿಡಕಾಡುಕುತಿತ್ತ
ಮಿಡುಕುತಿತ್ತ ತೊಡಕತಿತ್ತ
ಏನೋ ಒಂದ ಹುಡುಕತಿತ್ತ.

ಕಣ್ಣೀರಿನ ಮಳೆಯು ಕೂಡ
ತನ್ನ ದುಃಖ ತೋಡತಿತ್ತ
ತೋಡತಿತ್ತ ಬೇಡತಿತ್ತ
ದೊರಕದ್ದಕ್ಕ ಬಾಡತಿತ್ತ.



ಮನದ ಮಾಮರದ ಕೊನಿಗೆ ಕೋಕಿಲೊಂದು ಕೂಡತಿತ್ತ.

— 'ನಗೀನವಿಲು'

## ಬಿಸಿಲುಗುದುರೆ

ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏಸೊಂದು ನಗಿ ಇತ್ತ
ಏರಿಕಿ ನಗಿ ಇತ್ತs ॥ ಪಲ್ಲ ॥
ನನ್ನಕಿಮ್ಮ ಹೇಳ ಚನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತs ॥ ಅನುಪಲ್ಲವಿ ॥

(೧)

ಕಣ್ಣಾನ ಬೆಳಕೇನs ಮಾರ್‍ಯಾಗಿನ ತುಳುಕೇನ
ತುಟಿಯಾಗಿನ ಝುಳಕೇನ
ಉಡುಗಿಯ ಮಾಟೇನs ನಡಿಗಿಯ ಥಾಟೇನ
ಹುಡುಗಿ ಹುಡುಗಾಟೇನ !

(೨)

ಕಂಡ್ಹಾಂಕಾಣsಲಿಲ್ಲ ಅಂದ್ಹಾಂಗನ್ನsಲಿಲ್ಲ
ಬಂದ್ಹಾಂಗ ಬರಲಿಲ್ಲಾ
ಚಂದಾನ ಒಂದೊಂದ ಅಂದೇನಿ ಬೇರೊಂದ
ಆವನs ಇರಲಿಲ್ಲ !

(೩)

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಿನ್ಹಾಂಗ
ಬಂತಂತ ಮುಪ್ಪ ಬ್ಯಾಗ !

(೪)

ಕಣಕಣ್ಣ ನೆನಸೇನ ಮನಸಿಲೆ ಬಣಿಸೇನ
ಕಂಡೀತೆಂತೆಣಿಸೇನ
ಬಿಸಿಲುಗುದುರೀ ಏರಿ ನಿನ ನಗೆಯು ಸವ್ವಾರಿ
ಹೊರಟಿತ್ತು ಕನಸೇನ ?

(೫)

ಮುಂಗಾರಿ ಕಣಸನ್ನಿ ಹಾಂಗ ನಿನ ನಗಿ ಚೆನ್ನಿ
ಮುಂಚ್ಯೊಮ್ಮೆ ಮಿಂಚಿತ್ತ
ನಿನ ಮಾರಿ ನಿಟ್ಟಿಗೆ ಹಚ್ಚಿ ದಿಟ್ಟಿದಿಟ್ಟಿಗೆ
ನೋಡ್ತೇನಿ ನಾನಿತ್ತ !

(೬)

ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತ
ಹಳ್ಳ್ಯದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏಸೊಂದು ನಗಿ ಇತ್ತ
ಏರಿಕಿ ನಗಿ ಇತ್ತ !!

# ರಾಧೆಯ ಪಾಡು

ಸಖಿ : 'ಮುಂದೇನೆ ? । ಸಖಿ । ಮುಂದೇನೆ ?" ॥ ಪ ॥

ರಾಧೆ : 'ರೂಪ ಗುಣಕೆ ಮೆಚ್ಚಿ
ಬಂದನೆಂದೆನು ಹುಚ್ಚಿ
ಬಂದೆನೇ । ಮನದಿ ? ಅಂದೆನೇ'

ಸಖಿ : 'ಸಖಿ ಮುಂದೇನೆ ? । ಸಖಿ......'

ರಾಧೆ : 'ಕಾಣುವಂತಹನಲ್ಲ
ಕಾಣದಾದನು ಗೊಲ್ಲ
ಚೆಂದೇನೆ ? । ಇದು ಚೆಂದೇನೆ ?'

ಸಖಿ : 'ಸಖಿ ! ಮುಂದೇನೆ ? । ಸಖಿ......

ರಾಧೆ : 'ಇವನ ಪಂಥವ ತೊಟ್ಟು
ಬಳಗವೆಲ್ಲವ ಬಿಟ್ಟು
ಬಂದೆನೆ । ಅಲ್ಲಿ ಬಂದೆನೇ'

ಸಖಿ : 'ಸಖಿ । ಮುಂದೇನೆ ? ಸಖಿ......

ರಾಧೆ : 'ಒರೆದೆನಂಗಲಾಚಿ
ಕರೆದೆಜೀವವಬಾಚಿ
ನೊಂದೆನೇ । ಬಹಳ ನೊಂದೆನೇ'

ಸಖಿ : 'ಸಖಿ । ಮುಂದೇನೇ ? ಸಖಿ......'

ರಾಧೆ : 'ಬರನು, ಕೂತಿತು ಧನಿ
ಕಣ್ಣೆಲ್ಲ ಕಂಬನಿ
ತಂದೆನೇ ! ಕರಗಿ ತಂದೆನೇ'

ಸಖಿ : 'ಸಖಿ । ಮುಂದೇನೇ ? ಸಖಿ......'

ರಾಧೆ : 'ಕರಣ ಕಳವಳಿಸೀವೆ
ಹರಣ ತಳಮಳಿಸೀವೆ
ಒಂದೇನೇ । ಸ್ಥಿತಿ ಒಂದೇನೆ ?'

ಸಖಿ : 'ಸಖಿ । ಮುಂದೇನೇ ? ಸಖಿ......'

ರಾಧೆ : 'ಒಗೆದು ಹೂ ದಂಡಿಗೆ
ಯಮುನೆಯ ದಂಡಿಗೆ
ನಿಂದೆನೇ । ದುಃಖಿ ನಿಂದೆನೇ'

ಸಖಿ : 'ಸಖಿ । ಮುಂದೇನೇ ? ಸಖಿ......'

ರಾಧೆ : 'ಹೊಳೆಯೊಳು ಹೊತ್ತಾರೆ
ಧುಮುಕಿ ನಾ ಸತ್ತಾರೆ
ಹೊಂದೇನೇ ? । ಅವನ ಹೊಂದೇನೇ ?'

ಸಖಿ : 'ಸಖಿ । ಮುಂದೇನೆ ? ಸದೆ......'

ರಾಧೆ : 'ನಲ್ಲ ತೋರಿಸಿಕೊಂಡು
ಬೇಕಾದ ವರ ಬೇಡು
ಅಂದೇನೇ ? । ಸಖಿ ಅದೇನೇ'

ಸಖಿ : 'ಸಖಿ । ಮುಂದೇನೇ ? ಸಖಿ......'

ಕೃಷ್ಣ : ನಾನೆಲ್ಲಿ ಹೋಗಿದ್ದೆ
ನಿನ್ನ ಎದೆಯೊಳಗಿದ್ದೆ.
ನಿಂದೇನೇ. ಹೊರಗೆ ಬಂದೇನೇ
ಸಖಿ, ಮುಂದೆನೇ ನಿನ್ನ ಮುಂದೆನೇ !

# ಮನೆಗೆ ಹೋಗವ್ವಾ

ಬಂದೆವ್ವಾ ಕಾಮ ಹೊಟ್ಟೆಯೊಳಿಟ್ಟು
ನಿಂದೆವ್ವಾ ನೀರೆ, ನಾಚಿಕೆ ಬಿಟ್ಟು
ಮುಂದವ್ವ ನೀನು ಇಂದಿನ ತೊಟ್ಟು
ನೀಗವ್ವಾ । ಅದನ ನೀಗವ್ವಾ
ಹೇ । ಹೋಗವ್ವಾ । ಮನೆಗೆ ಹೋಗವ್ವಾ !

ಕಣ್ಣವ್ವಾ ! ಎಂಥ ಕ್ರೋಧಾ ತಳೆದೆ
ಮಣ್ಣವ್ವಾ ! ಮಿಂಚು ಮೈಯಾ ಬೆಳೆದೆ
ಹೆಣ್ಣವ್ವಾ ! ನೀನು ಹೆಣ್ಣೊಳು ಹೊಳೆದೆ
ಸಾಗವ್ವಾ । ಮುಂದೆ ಸಾಗವ್ವಾ
ಹೇ । ಹೋಗವ್ವಾ । ಮನೆಗೆ ಹೋಗವ್ವಾ !

ಬೇಡವ್ವಾ ಒಳಗೆ ಮತ್ಸರವೆಂಬೀ
ನೋಡವ್ವಾ ಕಾಳವಿಷವು ತುಂಬೀ
ಕೋಡವ್ವಾ ಇಲ್ಲಿ ಒಡೆಯಿತು, ನಿಂಬೀ
ನಾಗವ್ವಾ । ನೀನು ನಾಗವ್ವಾ
ಹೇ । ಹೋಗವ್ವಾ । ಮನೆಗೆ ಹೋಗವ್ವಾ !

ಬೇಕವ್ವಾ ದೈನ್ಯ ಬಿಂಕದ ತಾಯಿ
ಯಾಕವ್ವಾ ತೆರೆದು ತೊಂಡಿಲಬಾಯಿ
ಸಾಕವ್ವಾ ಮನವು ಮಾವಿನಕಾಯಿ
ಮಾಗವ್ವಾ । ಇನ್ನು ಮಾಗವ್ವಾ
ಹೇ । ಹೋಗವ್ವಾ । ಮನೆಗೆ ಹೋಗವ್ವಾ !

ಮೀರವ್ವಾ ಬೇಡ ಈಗಿನ ನಡಿಗೆ
ಕಾರವ್ವಾ ಡಂಭ ಕಾರುತ ಕಡೆಗೆ
ಸೇರವ್ವಾ ನೀನು ಪ್ರಭುವಿನ ಅಡಿಗೆ
ಬಾಗವ್ವಾ । ಅದಕ ಬಾಗವ್ವಾ
ಹೇ । ಹೋಗವ್ವಾ । ಮನೆಗೆ ಹೋಗವ್ವಾ !

ಆರವ್ವಾ ಕಡೆಯ ಮೋಹವ ಹಿಡಿದು
ಬೇರವ್ವಾ ಎಲ್ಲ ಕೂಡಲೆ ಕಡಿದು
ಆರವ್ವಾ ಪರಮ ಪದವ ನುಡಿದು
ಬೇಗವ್ವಾ । ಬಾರೆ ಆಗವ್ವಾ
ಹೇ । ಹೋಗವ್ವಾ ! ಈಗ ಹೋಗವ್ವಾ

# ಹುಬ್ಬಳ್ಳಿಯಾಂವಾ

ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವಾ
ವಾರದಾಗ ಮೂರು ಸರತಿ ಬಂದು ಹೋದಾಂವಾ ॥ ಪಲ್ಲ ॥

ಭಾರೀ ಜರದ ವಾರಿರುಮ್ಮಾಲಾ ಸುತ್ತಿಕೊಂಡಾಂವಾ
ತುಂಬ ಮಿಾಸಿ ತೀಡಿಕೋತ ಹುಬ್ಬ ಹಾರಸಾಂವಾ
ಮಾತುಮಾತಿಗೆ ನಕ್ಕ ನಗಿಸಿ ಆಡಿಸ್ಯಾಡಾಂವಾ
ಏನೋ ಅಂದರ ಏನೋ ಕಟ್ಟಿ ಹಾಡ ಪಾಡಾಂವಾ
ಇನ್ನೂ ಯಾಕ.........

ತಾಳೀಮಣಿಗೆ ಬ್ಯಾಳಿಮಣಿ ನಿನಗೆ ಬೇಕೇನಂದಾಂವಾ
ಬಂಗಾರ-ಹಾಡಿಲೇ ಭಂಡಾರಾನ ಬೆಳಸೇನಂದಾಂವಾ
ಕಸಬೇರ ಕಳೆದು ಬಸವೇರ ಬಿಟ್ಟು ದಾಟಿ ಬಂದಾಂವಾ
ಜೋಗತೇರಿಗೆ ಮೂಗುತಿ ಆಂತ ನನಽಗ ಅಂದಾಂವಾ
ಇನ್ನೂ ಯಾಕ.........

ಇರು ಅಂದರ ಬರತೇನಂತ ಎದ್ದು ಹೊರಡಾಂವಾ
ಮಾರಿ ಕೆಳಗ ಹಾಕಿತೇಂದರೆ ಇದ್ದು ಬಿಡಾಂವಾ
ಹಿಡಿ ಹಿಡೀಲೆ ರೊಕ್ಕಾ ತಗದು ಹಿಡಿ ಹಿಡಿ ಅನ್ನಾಂವಾ
ಖರೇ ಅಂತ ಕೈಮಾಡಿದರ ಹಿಡ್ಯದ ಬಿಡಾಂವಾ
ಇನ್ನೂ ಯಾಕ.........

ಚಹಾದ ಜೋಡಿ ಚೂಡಾಥಾಂಗ ನೀ ನನಗಂದಾಂವಾ
ಚೌಡಿಯಲ್ಲ ನೀ ಚೂಡಾಮಣಿಯಂತ ರಮಿಾಸ ಬಂದಾವಾ
ಬೆರಳಿಗುಂಗರಾ ಮೂಗಿನಾಗ ಮೂಗುಬಟ್ಟಿಟ್ಟಾಂವಾ
ಕಣ್ಣಿನಾಗಿನ ಗೊಂಬೀ ಹಾಂಗ ಎದ್ಯಾಗ ನಟ್ಟಾಂವಾ
ಇನ್ನೂ ಯಾಕ.........

ಹುಟ್ಟ್ಯಾ ಯಾಂವಾ ನಗೀಕ್ಯಾದಿಗಿ ಮುಡಿಸಿಕೊಂಡಾಂವಾ
ಕಂಡ ಹೆಣ್ಣಲೇ ಪ್ರೀತಿ ವೀಳ್ಯೇ ಮಡಿಚಿಕೊಂಡಾಂವಾ
ಜಲ್ಮ ಜಲ್ಮಕ ಗೆಣ್ಯಾ ಆಗಿ ಬರತೇನಂದಾಂವಾ
ಎದಿಮ್ಯಾಗಿನ ಗೆಣತಿನ ಮಾಡಿ ಇಟ್ಟಕೊಂಡಾಂವಾ
ಇನ್ನೂ ಯಾಕ.........

ಯಲ್ಲಿ ! ಪುಲ್ಲಿ ! ಪಾರೀ ! ತಾರೀ ! ನೋಡೀರೆನವ್ವಾ.?
ನಿಂಗೀ ! ಸಂಗೀ ! ಸಾವಂತರೀ ! ಎಲ್ಲ್ಯಾನ ನನ್ನಾಂವಾ ?
ಸೆಟ್ಟರ ಹುಡುಗ ಸೆಟಗೊಂಡ್ಹೋದಾ ಅಂತ ನನ್ನ ಜೀಂವಾ
ಹಾದೀಬೀದಿ ಹುಡಕತೈತ್ರೆ ಬಿಟ್ಟ ಎಲ್ಲಾ ಹ್ಯಾಂವಾ
ಇನ್ನೂ ಯಾಕ.........

# ಮರೆಯುವೆಯೋ, ಅರಿಯುವೆಯೋ !

ಎಲ್ಲಿ ಮರೆಯುವಿಯೋ ।
ಇಲ್ಲ ಅರಿಯುವೆಯೋ । ನಮ್ಮನ್ನs ॥ ಪಲ್ಲ ॥

ಮನದನ್ನ, ಒಲುಚಿನ್ನ, ಮಿದುಚಿನ್ನ, ಸವಿಜೊನ್ನ,
ಬೆರೆಯುವಿಯೋ ನಮ್ಮನ್ನಾ ॥ ಅ.ಪ.॥

ಹೃದಯ ಪಂಜರದಲ್ಲಿ ಗಿಳಿಯಾದೆವೆಂದೆವು
ಮಧುರ ಮೋಹನ ತೇಜಾ । ರಾಜಾ ।
ನವರತ್ನ ಸಾರದ
ಭವದ ಕಾಂತಾರದಿ
ತೊರೆಯುವಿಯೋ ನಮ್ಮನ್ನಾ ॥ ೧ ॥

ಮೊದಲ ಸೋಂಕಿಗೆ ಇನ್ನೂ ನೆನವು ನವಿರಾಗುತಿದೆ,
ಮದನ ಸುಂದರ ರೂಪಾ । ಭೂಪಾ ।
ಯುಗ ಆಗಿಹೋದವು,
ನಗೆಗೂಡಿ ಮತ್ತೊಮ್ಮೆ
ಕರೆಯುವಿಯೋ ನಮ್ಮನ್ನಾ ॥ ೨ ॥

ಇರುಳು ಮುಸುಕಲು, ಬಂದು, ನೆರಳು ನೆರೆದಿಹೆವಿಲ್ಲಿ
ಕರುಣೆ ಬಾರೈ ಮಾರಾ । ನೀರಾ ।
ಚೆಲುವ ಗೊಂಬೆಗಳಲ್ಲಿ
ಒಲುಮೆಯುಸಿರನು ತುಂಬಿ
ಪೊರೆಯುವಿಯೋ ನಮ್ಮನ್ನಾ ॥ ೩ ॥

# ಎಲ್ಲಿರುವೆ ರಾಜಗಂಭೀರಾ !

ಎಲ್ಲಿರುವೆ ರಾಜಗಂಭೀರಾ – ನೀರಾ ॥ ಪ ॥

ಹಾಳು ದೇಗುಲದಲ್ಲಿ ಗಾಳಿ ಗೋಳಿಡುವೊಲು
ಉಸಿರಾಡುತಿದೆ ಜೀವಾ,
ಕಲ್ಲುಗೋಡೆಯು ಕೂಡ ಸೊಲ್ಲುಗೊಡುತಲಿದೆ
ಎಲ್ಲಿರುವೆ ರಾಜಗಂಭೀರಾ – ನೀರಾ

ಬೆಳಕ ಬೇಡುತಲಿದೆ ದಾಳಿ ಕಾಣದೆ ಬಾಡಿ
ಬಳ್ಳಿಯಾಗಿಹ ಜೀವಾ,
ಮಲ್ಲಿಗೆಯಾದದೆ ಮೊಗ್ಗೆಯಾಗಿಯೆ ಇದೆ,
ಎಲ್ಲಿರುವೆ ರಾಜಗಂಭೀರಾ – ನೀರಾ

ಮುಗಿಲ ಚಿಕ್ಕಿಗಳೆಲ್ಲಾ ಮೊಗ ಕೆಳಗೆ ಹಾಕಿವೆ
ನೀರ ನೆರಳೊಲು ಜೀವಾ,
ಅಲ್ಲಾಡುತಿವೆ – ಎನುತ 'ಅಮವಾಸೆ ಹರಹಿದೆ'
ಎಲ್ಲಿರುವೆ ರಾಜಗಂಭೀರಾ – ನೀರಾ

ಕಾಣದ ವಸ್ತುವ ಕಾಣಬೇಕೆಂಬಾಸೆ
ಮಿತಿಯ ಮೀರಿದೆ ಜೀವಾ,
ನಲ್ಲ, ನೀರಡಿಸಿದೆ, ಕಾವೇರಿ ಆರಿದೆ
ಎಲ್ಲಿರುವೆ ರಾಜಗಂಭೀರಾ ನೀರಾ

ತನ್ನ ಬಿಡುವೆಯೆ ತನಗೆ ಎರವಾಗಿ ಹೊರತಾಗೆ,
ನಿರ್ಜೀವವೀ ಜೀವಾ,
ಇಲ್ಲಿ ರಂಭೆಯರೆಲ್ಲಾ ನಂಬಿ ಕುಳಿತಿಹರಲ್ಲೋ,
ಎಲ್ಲಿರುವೆ ರಾಜಗಂಭೀರಾ – ನೀರಾ

# ಮುಗ್ಧೆ

ನೀ ಮಳ್ಳ ಜಾತಿಯ ಹೆಣ್ಣು
ಬಿಟ್ಟ ಏನು ಮಣ್ಣು
ಇರತಿ ನಲ್ಲನ್ನ
ಸೂರ್ಯನ ಕೂಡ ಹೊತ್ತೇರಿ-
ಧಾಂಗ ನಿನ ಮಾರಿ
ನೀ ಸುರೇಪಾನಧಾಂಗ ತಿರುವತೀದಿ

ನಿನ ಮುಸುಕು ಕತ್ತಲೀಯೊಳಗೆ
ಹೊರಳಿ ಬೆಳ್ಬೆಳಗ
ಬಿಡತ ತಣ್ಣುಸಿರು.
ತಂಗಾಳಿಗುರುಳುವಿಬ್ಬನಿ
ನಿನ್ನ ಕಂಬನಿ
ನೀ ಸುರೇಪಾನಧಾಂಗ ಸುರಿಸತೀದಿ.

ನೀ ನೀರು ಬೇಡುವಾ ಬಳ್ಳಿ
ನೀರ ನಿಲ್ಲದಲ್ಲಿ
ಬದುಕು ಎಂತೇನ್ಸ
ಹಿತ್ತಲ ಗಿಡವು ಮದ್ದಲ್ಲ
ನಿನ್ನ ಸದ್ದಿಲ್ಲ
ನೀ ಸುರೇಪಾನಧಾಂಗ ಸೊರಗತೀದಿ.

# ಛಾಯಾ

(ಸಂಸ್ಕೃತ)

ಅರಸು ನಡತೆಯನುಸರಿಸಿ ಲೋಕ ಒಳಿತಾಗಿ ಆಳಬೇಕು ;
ಎದೆಯ ಬೆಂಕಿಗೂ ಬೂದಿಗೊಳದೆ ಬಿರುಸಾಗಿ ಬಾಳಬೇಕು ;
ತಾನೇ ಕೈಯಾರೆ ಸತಿಯ ತ್ಯಜಿಸೆ ದುರ್ದಮ್ಯ ಈಗ ಕ್ಷೋಭ ;
ಬಿಟ್ಟ ನಿಟ್ಟುಸಿರೆ ಬದುಕೀಸಿತು ಅತ್ತುದ್ದೆ ಜೀವಲಾಭ.

ಹೋಗಬೇಡ ಪ್ರಿಯ, ಹೋಗಲೇಬೇಕೆ ? ಹೋಗು ಸಂಗಡಿರುವೆ
ನಿನ್ನ ನೆರಳಾಗಿ ನಿನ್ನ ಕರುಳಾಗಿ ಮರಳಿ ಹುಟ್ಟಿ ಬರುವೆ,
ನಿನ್ನ ನಡೆಯಲ್ಲಿ ನಿನ್ನ ಕೊಡೆಯಲ್ಲಿ ತ್ರಾಣವನ್ನು ತರುವೆ.
ಜೀವದೊಡನಾಡಿ ಎದೆಯ ಒಳನಾಡಿ ಪ್ರಾಣವೆಂದು ಇರುವೆ.

ಹೋಗಬೇಡ ಎಂದರೂ ಹೊರಟೆ ಹೋ ಹೋಗು ಇಲ್ಲ ಹೋಗು.
ತನ್ನ ತಾನೆ ದುಂಬಾಲ ಬಿದ್ದ ಕವಿನೆರಳ ದೂಗು ನೂಗು.
ಬಿಕ್ಕಿರಲಿ ನೀನು ಸಕ್ಕಿರಲಿ ಎಲ್ಲು ಕೆಕೊಳ್ಳುವೆ ನಿನ್ನ ತಕ್ಕೆ
ಬೆಂಬಲದೊಳುಲಿವ ಮುಂಬಲದೊಳಲೆವೆ ನಾ ನಿನ್ನ ಕಣ್ಣ ಚುಕ್ಕೆ.

ಹೋಗು ಎಂದು ನಾ ಹೇಗೆ ಎನಲಿ ಬಾ ಎನ್ನುವುದೆನ್ನ ಬಾಯಿ.
ನಿನ್ನನೊಡಗೂಡಿತೆನ್ನ ಹೃದಯ ಒಡೆದೆಂದೊ ಎದೆಯ ಕಾಯಿ.
ಕಾಲ ನಾತ ಮೂಸುತ್ತ ಬಹುದು ನಾಯಕನ ಬೆನ್ನ ನಾಯಿ.
ಮರುಳಿ ನಾನು ನಾನೋ ಪಿಶಾಚಿ ಇರು ಅನ್ನು ಇಲ್ಲ ಸಾಯಿ.

# ನನ ಕೈಯು ಹಿಡಿದಾಕೆ !

(೧)

ನನ ಕೈಯ ಹಿಡಿದಾಕೆ ಅಳು ನುಂಗಿ ನಗು ಒಮ್ಮೆ
ನಾನೂನು ನಕ್ಕೇನು
ಇಲದಿರಕ ನಿನ ಅಳುವ ಹುಚ್ಚು ಹಳ್ಳದ ಕಳ್ಳ-
ಹುದುಲಾಗ ಸಿಕ್ಕೇನು

(೨)

ಜಗದಾಗ ಯಾವಾಗ ನೆರಳು ಬೆಳಕಿನಾಗ
ಹಗಲಿರುಳು ಇದ್ದಾವಾ
ಎದ್ದೇನು ಬಿದ್ದೇನು ಕತ್ತಲು ಬಿಸಿಲೇನ
ನಕ್ಕಾವಾ ಗೆದ್ದಾವಾ !

(೩)

ಹುಸಿನಗುತ ಬಂದೇವ ನಸುನಗುತ ಬಾಳೋಣ
ತುಸುನಗುತ ತೆರಳೋಣ
ಬಡ ನೂರು ವರುಷಾನ ಹರುಷಾದಿ ಕಳೆಯೋಣ
ಯಾಕಾರೆ ಕೆರಳೋಣ !

(೪)

ಬಡತನ ಒಡೆತನ ಕಡೆತನಕುಳಿದಾವೇನ
ಎದೆಹಿಗ್ಗು ಕಡೆಮುಟ್ಟ
ಬಾಳಿನ ಕಡಲಾಗ ಅದನ ಮುಳುಗಿಸಬ್ಯಾಡ
ಕಡೆಗೋಲು ಹಿಡಿಹುಟ್ಟ !

(೫)

ನನ ಕೈಯ ಹಿಡದಾಕೆ ಅಳು ನುಂಗಿ ನಗು ಒಮ್ಮೆ
ನಾನೂನು ನಕ್ಕೇನು
ಇಲದಿರಕ ನಿನ ಅಳುವ ಹುಚ್ಚು ಹಳ್ಳದ ಕಳ್ಳ-
ಹುದುಲಾಗ ಸಿಕ್ಕೇನು !

## ಚಿರಂತನ

ಆ ಮುಖಾ – ಈ ಮುಖಾ
ಯಾವ ಗಂಡೊ
ಯಾವ ಹೆಣ್ಣೊ
ಪ್ರೀತಿಯೆಂಬ ಚುಂಬಕಾ
ಕೂಡಿಸಿತ್ತು
ಆಡಿಸಿತ್ತು
ಕೂಡಲದೊಲು ನೋಟವಾ
ಮೂರು ದಿನದ ಆಟವಾ

ಆ ಮುಖಾ – ಈ ಮುಖಾ
ಹೆತ್ತುದೊಂದು
ಹೊತ್ತುದೊಂದು
ಎಂತ ಹಾಸ್ಯದೀ ಸುಖಾ
ಬೆರಕೆಯಿಂದೊ
ಎರಕದಿಂದೊ
ಬಂತು ಬೇರೆ ಜೀವನಾ
ಕೃಪೆಯೊ ಕಾಮದೇವನಾ

ಆ ಮುಖಾ – ಈ ಮುಖಾ
ಒಂದು ಸತ್ತು
ಒಂದು ಅತ್ತು
ಒಂದಕೊಂದು ಸಮ್ಮುಖಾ
ಬೇರೆ ಬತ್ತಿ
ದೀಪ ಹತ್ತಿ
ಬೆಳಗುತಿಹುದು ಸ್ನೇಹವಾ
ತುಂಬಿ ಬೇರೆ ದೇಹವಾ

ಆ ಮುಖಾ – ಈ ಮುಖಾ
ಇದ್ದು ಅಂತ
ಆಯ್ತು ನಂತ

ಒಗೆತನದೀ ಒಮ್ಮುಖಾ
ಅಂಟಿಗಂಟು
ಚಿಗಿತು ನಂಟು
ಇದುವೆ ನಿತ್ಯ ನೂತನಾ
ಸಂತತಿಯೆ ಚಿರಂತನಾ

# ನಲ್ಲನಲ್ಲೆಯರ ಲಲ್ಲೆ

ನಲ್ಲ : 'ನಲ್ಲೆ ! ನಿನ್ನ ಲಲ್ಲೆವಾತು
ಮುಗುಳುನಗೆಯಲಲ್ಲೆ ಹೂತು
ಸೋತು, ಓತು, ಬಂತು, ಹೋ'ತು
'ನಲ್ಲೆ, ನಿನ್ನ ಲಲ್ಲೆವಾತು.'

ನಲ್ಲೆ : 'ನಲ್ಲ ! ನಿನ್ನ ಲಲ್ಲೆವಾತು
ಮೀಸೆಕುಡಿಯಲಲ್ಲೆ ಹೂತು
ಕುಣಿದು, ಮಣಿದು, ಬಂತು, ಹೋ'ತು
ನಲ್ಲ, ನಿನ್ನ, ಲಲ್ಲೆವಾತು,'

ನಲ್ಲ : 'ನಲ್ಲೆ ! ನಿನ್ನ ಲಲ್ಲೆವಾತು
ಕಣ್ಣ ಕಿರಣದಲ್ಲಿ ನೂತು
ನೇತು, ಜೋತು, ಬಂತು, ಹೋತು
ನಲ್ಲೆ, ನಿನ್ನ ಲಲ್ಲೆವಾತು.'

ನಲ್ಲೆ : 'ನಲ್ಲ ! ನಿನ್ನ ಲಲ್ಲೆವಾತು
ಹುಬ್ಬು–ಬಿಲ್ಲಿನಲ್ಲೆ ಆತು
ಸಿಡಿದು, ಮಿಡಿದು, ಬಂತು, ಹೋ'ತು
ನಲ್ಲ, ನಿನ್ನ ಲಲ್ಲೆವಾತು,'

ನಲ್ಲ : 'ನಲ್ಲೆ ! ನಿನ್ನ ಮಾತಿನಲ್ಲೆ
ಹುಟ್ಟಿ ಬಂತು ಹುಟ್ಟು–ಲಲ್ಲೆ ;
ಹೂಂಗುಟ್ಟಿ ಹುದುಗಬಲ್ಲೆ,
ಒಲ್ಲೆಯೆಂದು ಒಲಿಸಬಲ್ಲೆ'.

ನಲ್ಲೆ : 'ನಲ್ಲ ! ನಿನ್ನ ಮಾತಿನಲ್ಲೆ
ಎವೆ ಮೃದಂಗದೊಂದೆ ಸೊಲ್ಲೆ
ಹುಚ್ಚು ಹಿಡಿಸಿ ನುಡಿಸಬಲ್ಲೆ ;
ಹಿಡಿದ ಹುಚ್ಚು ಬಿಡಿಸಬಲ್ಲೆ.'



ನಲ್ಲ ನಲ್ಲೆ ಕೂಡಿದಲ್ಲೆ, ಹಿಗ್ಗಿಗುಂಟೆ ಮೇರೆ ಎಲ್ಲೆ ?

—'ನಲ್ಲನಲ್ಲೆಯರ ಲಲ್ಲೆ'

ನಲ್ಲ : 'ನಲ್ಲೆ ! ನೀನು ಮಲೆಯ ಮೊಲ್ಲೆ.
ನಿನ್ನ ಮೃದು ಸುಗಂಧ ಲಲ್ಲೆ ;
ಆದರ ಸವಿಯ ಧ್ಯಾನದಲ್ಲೆ
ಏಕತಾನಮಾನವಲ್ಲೆ ?'

ನಲ್ಲೆ : 'ನಲ್ಲ ! ನಿನ್ನ ಉಸಿರಿನಲ್ಲೆ
ಗಾನದೊಂದು ಗಮಕವಿಲ್ಲೆ ?
ಆ ಪ್ರಾಣವಿಲ್ಲದಲ್ಲೆ
ಗಾಳಿಮಾತು ಜೊಳ್ಳು ಲಲ್ಲೆ !'

'ಬಾನು ಬೆಳಕು ಹೂಡಿದಲ್ಲೆ
ಕಡಲಿನಲ್ಲಿ ಮೂಡಿದಲ್ಲೆ ;
ನಲ್ಲ ನಲ್ಲೆ ಕೂಡಿದಲ್ಲೆ
ಹಿಗ್ಗಿಗುಂಟೆ ಮೇರೆ ಎಲ್ಲೆ ?'

## ತಾಯಿ–ಕೂಸು

ಹಸುಗೂಸು ಮಲಗಿಹುದು
ಹುಸಿನಗೆಯು ತೊಲಗಿಹುದು
ಕನಸಿನಾಚೆಗೆಯಿರುವ ನಿದ್ದೆಯಲ್ಲಿ
ತನ್ನನೂ ಮರೆತಿಹುದೋ
ತನ್ನೊಳಗೆ ಬೆರೆತಿಹುದೊ
ಹಸಿವು ಭಯ ಮುದ್ದಾಟವಿಲ್ಲ ಅಲ್ಲಿ.

ಉಸಿರ ದಾರದ ತುದಿಗೆ
ಹಾರುಹಕ್ಕಿಯ ಬದಿಗೆ
ಜೀವಪಟ ಹೆಡೆಯಾಟವಾಡುತಿಹುದು
ಮೇಲ್ಮುಗಿಲ ಗಾಳಿಯಲಿ
ತನ್ನೊಂದು ಲೀಲೆಯಲಿ
ತೀರಲದು ತಾನೆ ಇಳಿಗಿಳಿಯಲಹುದು.

ಕೆಲಸದಲಿ ಬಿಡುವಿಲ್ಲ
ಕೂಸಿನಲಿ ಮನವೆಲ್ಲ
ತಾಯಿ ಯೋಗಿನಿ ಮೈಲಿ ದುಡಿಯುತಿಹಳು.
ತನ್ನೆದೆಯ ತೊಟ್ಟಿಲಲಿ
ಕಂದನನು ಇಟ್ಟಲ್ಲಿ
ಕಂಠದಲಿ ಜೋಗುಳವ ನುಡಿಸುತಿಹಳು.

ಇತ್ತ ಮರುಳಾಟದಲೊ
ಜೀವದೊಳತೋಟಿಯಲೊ
ಮುಖರಂಗ ಮಂಡಲದಿ ಭಾವ ಭಾವ !
ಹುಬ್ಬು ಗಂಟಿಕ್ಕುವದು ;
ಎದೆ ಏಕೊ ಬಿಕ್ಕುವದು ;
ತುಟಿಯು ನಗುವುದು ; ಅದನು ಕಂಡನಾವ ?

# ನಾನೊಂದು ನೆನೆದರೆ

ನಾನೊಂದ ನೆನೆದರ ನೀನೊಂದ ನೆನೆಯುತಿ
ನನ್ನ ನಗಿಗ್ಯಾಕ ಮುನಿಯುತಿ
ಎಂದೆನಗ
ಬಿದ್ದಿತು ನೋಡು ಇತಿಮಿತಿ.

ಅರಸ ತೂಕದ ಹೆಣ್ಣ ಸರಸವ್ಯಾತಕಿನ್ನ
ವಿರಸವಾದೀತ ನನ ಮನಸು
ಮುಬ್ಬಿಳಿದು
ಹರಿದುಹೋಯಿತ ಸವಿಗನಸು.

ಹಾಸಿಗಿ ಮುಗ ಮುಗ, ಮಂಚಕ ರಝಗ ರಝಗ
ನನ್ನ ಎದಿ ಮಾತ್ರ ಧಗ ಧಗಃ
ಉರಿದೀತು
ಹೊತ್ತಿತ ಬೆಂಕಿ ಹೊರ ಜಗಾ.

ಸವಿಸತ್ತ ತಂಬೂಲ ಸೊಪ್ಪಾತು ದವಡ್ಯಾಗ
ಅದರ ಸವಿರಸ ಕಹಿವಿಷ
ಆಗಿತ್ತ
ನುಂಗಲುಗುಳಲು ಎಡೆಯಿಲ್ಲ.

ಎಸ್ತ ಕನ್ನಡಿ ಹರಳು ಬೆಸ್ತು ಕೂಡೀತೇನ ?
ಹಸ್ತ ಕರಳೀನ ಕುಡಿ ಚಿವುಟಿ
ಕಡೆಗೊಮ್ಮೆ
ಸೊಸ್ತಿ ಎಂದ್ಯರು ಫಲವೇನ ?

# ನೀ ಹೀಂಗ ನೋಡಬ್ಯಾಡ ನನ್ನ

ನೀ ಹೀಂಗ ನೋಡಬ್ಯಾಡ ನನ್ನ
ನೀ ಹೀಂಗ ನೋಡಿದರ ನನ್ನ ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ ॥ ಪ ॥

ಸಂಸಾರಸಾಗರದಾಗ, ಲೆಕ್ಕವಿರದಷ್ಟು ದುಃಖದ ಬಂಡಿ
ನಾ ಬಲ್ಲೆ ನನಗೆ ಗೊತ್ತಿಲ್ಲದಿದ್ದರೂ ಎಲ್ಲಿ ಆಚೆಯಾ ದಂಡಿ
ಮಲಗಿರುವ ಕೂಸು ಮಲಗಿರಲಿ ಅಲ್ಲಿ, ಮುಂದಿನದು ದೇವರ ಚಿತ್ತ
ನಾ ತಡೀಲಾರೆ ಅದು, ಯಾಕ ನೋಡತೀ ಮತ್ತ ಮತ್ತ ನೀ ಇತ್ತ ?

ತಂಬಲಽ ಹಾಕದಽ ತುಂಬ ಕೆಂಪು ಗಿಣಿಗಡಕ ಹಣ್ಣಿನ ಹಾಂಗ
ಇದ್ದಂಥ ತುಟಿಯ ಬಣ್ಣೆತ್ತ ಹಾರಿತು ? ಯಾವ ಗಾಳಿಗೆ, ಹೀಂಗ
ಈ ಗದ್ದ, ಗಲ್ಲ, ಹಣೆ, ಕಣ್ಣು, ಕಂಡು ಮಾರೀಗೆ ಮಾರಿಯ ರೀತಿ
ಸಾವಸಽ ತನ್ನ ಕೈ ಸವರಿತಲ್ಲಿ. ಬಂತೆನಗ ಇಲ್ಲದ ಭೀತಿ.

ಧಾರೀಲೆ ನೆನೆದ ಕೈಹಿಡಿದೆ ನೀಸು ತಣ್ಣಽಗ ಅಂತನ ತಿಳಿದು
ಬಿಡವೊಲ್ಲಿ ಇನ್ನೂನೂ ಬೂದಿ ಮುಚ್ಚಿದ ಕೆಂಡ ಇದಂತ ಹೊಳೆದು
ಮುಗಿಲನ ಕಪ್ಪುರಿಸಿ ನೆಲಕ ಬಿದ್ದರ ನೆಲಕ ನೆಲ ಎಲ್ಲನ್ನಽ
ಆ ಗಾದಿಮಾತು ನಂಬಿ, ನಾನು ದೇವರಂತ ತಿಳಿದಿಯೇನ ನೀ ನನ್ನ

ಇಬ್ಬನಿ ತೊಳೆದರೂ ಹಾಲು ಮೆತ್ತಿದಾ ಕವಳಿಕಂಟಿಯಾ ಹಣ್ಣು
ಹೊಳೆ ಹೊಳೆವ ಹಾಂಗ ಕಣ್ಣಿರುವ, ಹೆಣ್ಣು, ಹೇಳು ನಿನ್ನವೇನ ಈ ಕಣ್ಣು ?
ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆ ಕಂಡು ಒಮ್ಮಿಗಿಲಽ
ಹುಣ್ಣಿವೀ ಚಂದಿರನ ಹೆಣಾ ಬಂತೋ ಮುಗಿಲಾಗ ತೇಲತ ಹಗಲ !

ನಿನ್ನ ಕಣ್ಣೆನ್ಯಾಗ ಕಾಲೂರಿ ಮಳೆಯು, ನಡನಡಕ ಹುಚ್ಚುನಗಿ ಯಾಕ
ಹನಿ ಒಡೆಯುಲಿಕ್ಕೆ ಬಂದಂಥ ಮೋಡ ತಡಧಾಂಗ ಗಾಳಿಯ ನೆವಕ
ಅತ್ತಾರೆ ಅತ್ತುಬಿಡು, ಹೊನಲು ಬರಲಿ, ನಕ್ಕ್ಯಾಕ ಮರಸತೀ ದುಕ್ಕ ?
ಎಲೆಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ.

## ದೀಪ

ಬಂತಿದೊ ಶೃಂಗಾರಮಾಸ
ಕಂತು ನಕ್ಕ ಚಂದ್ರಹಾಸ
ಎಂದು ತುಂಬಿತಾಕಾಶ
ಕಂಡವರನು ಹರಸಲು

ಕಿರಿಬೆರಳಲಿ ಬೆಳ್ಳಿಹರಳು
ಕರಿ ಕುರುಳೊಳು ಚಿಕ್ಕೆ ಅರಳು
ತೆರಳಿದಳಿದೊ ತರಳೆ ಇರುಳು
ತನ್ನರಸನನರಸಲು.

ಗಂಗೆ ಯಮುನೆ ಕೂಡಿ ಹರಿದು
ಸಂಗಮ ಜಲ ಬಿಳಿದು ಕರಿದು
ತಿಂಗಳ ನಗೆ ಮೇರೆವರದು
ಬೇರೆ ಮಿರುಗು ನೀರಿಗು.

ಪಂಥದಿಂದ ಮನೆಯು ತೊರೆದು
ಪಾಂಥ ನೆನೆದನತ್ತುಕರೆದು :
ಇಂಥ ಸಮಯ ಬೇರೆ ಬರದು
ದಂಪತಿಗಳಿಗಾರಿಗು !

ನಾನು ನೀನು ಜೊತೆಗೆ ಬಂದು
ಈ ನದಿಗಳ ತಡಿಗೆ ನಿಂದು
ಸಾನುರಾಗದಿಂದ ಇಂದು
ದೀಪ ತೇಲಿಬಿಟ್ಟೆವೇ–
ದೀಪ ತೇಲಿಬಿಟ್ಟೆವು.

# ಮನದನ್ನೆ

ಆಡದಿರು ಮನದನ್ನೆ
ಎನಗೆ ಇದಿರಾಡದಿರು.

ವಾದಕ್ಕೆ ಬೇಸತ್ತು
ಮರ್ಮಘಾತಕ್ಕೆ ಸತ್ತು
ಉಳಿದು ಬಂದೆ ;
'ಎಲ್ಲಿಹುದು ತಿಳಿವಳಿಕೆ
ಜೀವನದ ಸಲುವಳಿಕೆ'
ಎಂದು ತಳಮಳಿಸಿ ನೀರಡಿಸಿ ಬಂದೆ ;
ಹೇಳುತಿರೆ 'ಹೂಂ' ಎನ್ನು
ಒರೆದು ನೋಡೀ ಹೊನ್ನು
ಹೊಳೆಧ ಗೆರೆಬಣ್ಣಗಳ ತಿಳಿದು ತಿಳಿದು ನೋಡು
ಎದೆಯ ಆಳದ ಮಾತನಳೆದು ಆಡು ;
ಹೀಗೆನಲು ಹಾಗೆಂದು
ಬೆಂದ ಹೆಣವನೆ ಕೊಂದು
ಭೂತಲೀಲೆಯಲೀಗ ತೊಡಗಬೇಡ ;
ಅಡಗಿ ಅಡಕದೆ ಮನವ ಮಡಗಬೇಡ
ನಿನ್ನ ತಿಳಿವನು ಹಣಿಸು
ನಿನ್ನ ಹೊಟ್ಟೆಯನುಣಿಸು
ಇದಿರಾಡದಿರು ಗೆಳತಿ ನೀನು ಕೂಡ
ಹೃದಯವನು ರಣರಂಗ ಮಾಡಬೇಡ.

* * *

ವಾದಕ್ಕೆ ಪ್ರತಿವಾದ
ಸಾಕು ವಾದವಿವಾದ
ಜೀವ ಸಂವಾದಕ್ಕೆ ಹಸಿರು ಬಂದೆ
ನೀಡು ಸಿಪ್ಪೆಯ ಸುಲಿದು ತಿಳಲನೊಂದೆ

ಜೀವ ಜೀವಾಳದಲಿ
ಹೃದಯಾಂತರಾಳದಲಿ
ಇಳಿದು ನೋಡು
ಬಗೆಯ ಬಾನ್‌ಬಯಲನ್ನು
ಅಳೆದು ನೋಡು.

ಹಚ್ಚಿ ರೆಕ್ಕೆಗೆ ರೆಕ್ಕೆ ಹಾರಿ ನೋಡು.
ಈಸಾಡು ತೇಲಾಡು ಮುಂದೋಡು ಮೇಲಾಡು
ಅಣಕ ಮೂದಲಿಕೆಯಲಿ ಕಟಕಬೇಡ.
ಕೆನ್ನೀರ ಕೆಸರನ್ನು ಕಲಕಬೇಡ.
ಯುಗ ಯುಗದ ಕಣ್ಣೀರು
ಎದೆಯೊಳಿದೆ ಮುನ್ನೀರು
ಅದರ ತೆರೆಗಳ ತೆರೆದು ಮುಳುಗಿ ನೋಡು
ನೆಲೆಯಿರದ ನೆಲವನ್ನು ಬಗೆದು ನೋಡು.
ನಾಗಲೋಕದ ರತ್ನ-
ರಾಶಿ ತರುವ ಪ್ರಯತ್ನ
ವ್ಯರ್ಥ ಆಯಾಸದಲಿ ಮಾಡಬೇಡ
ನನ್ನದಿದು ನಿನ್ನದಿದು
ಎಂದೂ ಎರಡನು ಬಗೆದು
ಪಾಲುಗಾರಿಕೆಗಾಗಿ ಹೆಣಗಬೇಡ
ನಿನಗೆ ನೀರಿಲ್ಲೆಂದು ಒಣಗಬೇಡ.
ನಿನ್ನ ಮೈಸಿರಿಯೇನು ?
ನನ್ನ ಐಸಿರಿಯೇನು ?
ಒಂದುಸಿರೆ ತಾನಾಡಿದಂತೆ ಇಹುದು
ಹೀಗಿರಲು ಬಾಳುದ್ದ ಬದುಕಬಹುದು.
ಗಾಳಿಮಾತುಗಳೆಂದು ಉಸಿರನೆಳೆದಾಡಿದರೆ
ಪ್ರಾಣವೇ ಬರಿ ಗಾಳಿಯಾಗಲಹುದು.

* * *

ಗಂಡು ದರ್ಪವ ಹರಿದು
ಬಿರುಸು ಬಿಂಕವ ತೊರೆದು

ತೋಳ ತೊಟ್ಟಿಲ ಮಗುವು ಆಗಿ ಬಂದೆ.
ಗೊಂಬೆಯಾಡಿಸಿದಂತೆ ಆಡಿಸೆಂದೆ
ನಿನ್ನ ತಾಯ್ತನದ ಸೈರಣೆಯ ವಿತರಣೆ ಬೇಕು.
ನಿನ್ನ ತಾಳ್ಮೆಯ ಸೈಪಿನೊಂದು ಕರುಣೆಯು ಸಾಕು.

ಮಲಗಿರುವ ಹಾವನ್ನು
ಕೆಣಕಬೇಡ
ಕಚ್ಚಿ ವಿಷ ಕಾರಿದರೆ
ತಿಣಕಬೇಡ.
ನಗೆಯ ನಾಗಸ್ವರವ
ಅವರದೇ ತರ ತರವ
ಹಚ್ಚಿ ನೋಡು
ನನ್ನೆದೆಯ ಒಲೆದಾಟ
ನನ್ನ ತಲೆದೂಗಾಟ
ಮೆಚ್ಚಿ ನೋಡು.
ಸಿಡುಕಿರಲಿ ಮಿಡುಕಿರಲಿ
ಯಾವುದೇ ಒಡಕಿರಲಿ
ಆದರ ಸಪ್ಪಳವನ್ನು ಮಾಡಬೇಡ
ಹಾಳು ರಾಗವ ಮತ್ತೆ ಹಾಡಬೇಡ
ಆದಕಾಗಿ ಜೀವದುಸಿರೆತ್ತಬೇಡ.
ಹುಟ್ಟು ಹುಸಿನಗೆಯಲ್ಲಿ
ತಿಳಿದವರ ಬಗೆಯಲ್ಲಿ
ನನ್ನ ಜೀವನಕೆ ಬೆಳಕಿತ್ತು ನೋಡು.
ಮುನಿದರೂ ಕ್ಷಮಿಸುವೆನು
ಕೂಸಿನೊಲು ರಮಿಸುವೆನು
ಅಂಗೈಯ ಹುಣ್ಣಿನಾರೈಕೆ ಕೊಡುವೆ
ಕೂಸೆಂದು ಹುಡುಗನೊಲು ಮುತ್ತನಿಡುವೆ
ನಿನ್ನ ಕಣ್ಣೀರ್ಮುತ್ತು
ನನ್ನ ಕೊರಳಿನ ಸುತ್ತು

ಆಭರಣವೆಂದು ಮೆರೆದಾಡುತಿರುವೆ
ಸ್ವರ್ಗ ನರಕಕ್ಕೆ ಕಳೆದಲ್ಲಿ ಬರುವೆ.
ಇದಿರಾಡದಿರು ಮತ್ತೆ.
ಎದಿರಾಡದಿರು ಇತ್ತ
ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿನಂತೆ
ನಾನೆಂದರೂ ಒಂದೆ
ನೀನೆಂದರೂ ಒಂದೆ
ಹೊಂದುಗೂಡಿಕೆ ಇರದ ಜನಕೆ ನೊಂದೆ
ನೀನು ನನ್ನವಳೆಂದು ಬಳಿಗೆ ಬಂದೆ
ಹೊಸ ಹುಟ್ಟು ಬರುವದಿದೆ ಇನ್ನುಮುಂದೆ
ಆಗೋಣ ಆ ಜಗದ ತಾಯಿತಂದೆ

# ಹೆಣದ ಹಿಂದೆ

ನಾಲ್ಕು ಮಂದಿ ಹೆಗಲ ಮೇಲೆ
ಮುಂದೆ ಹೆಣವು – ಹಿಂದೆ ಹೆಣ್ಣು
'ಬಿರಿಯೆ ತಾಯಿ ನಿನ್ನ ಎದೆಯು
ಬಾಗಿಲನ್ನು, ತೆರೆಯೆ ತಾಯಿ'
ಎನ್ನುವಂತೆ ಅಡಿಗಡಿಗೂ
ನೆಲವನಮುಕಿ ನೋಡುತಿಹಳು,
ಓಡುತಿಹಳು ಗಾಳಿ ಸೇರಿ
ದಂತೆ ಒಮ್ಮೆ ಹೆಣದ ಹಿಂದೆ.
ಎರಡು ಕಣ್ಣ ಮುಚ್ಚಿಕೊಂಡಿ-
ನ್ನೊಂದು ಕಣ್ಣು ತೆರೆಯಲೆಂದು
ಜಾನಿಸುವಳೊ ಎಂಬ ಹಾಗೆ
ಮುಗಿಲನೊಮ್ಮೆ ದಿಟ್ಟಿಸುವಳು–
ಹಾಗೆ ಮಾಡಬೇಡ ತಾಯಿ
ಝಲ್ಲನೆ ನೆಲ ನಡುಗುತಿಹುದು.

ಮದುವೆಯೊಂದು ಹಬ್ಬವೆಂದು
ಓಡಿಯು ಬಂದ ಕೈಯ ಹಿಡಿದ
ಹೆಣ್ಣ ಕೈಯ ಬಿಟ್ಟುಕೊಟ್ಟು
ಬಾಳ ನೀರ ನಡುವೆ, ಹೊರಟ
ಸತ್ತು ಗೆದ್ದ ವೀರನವನು.
ಶೋಭಾನೆ ಹೇಳಿದವರು
ಅಕ್ಕಿ.ಕಾಳ ತೂರಿದವರು
ಅವನ ಹೆಸರ ಕೇಳಿದವರು
ಎಡಕೆ ಬಲಕೆ ಹಾಯಲಿಲ್ಲ.

ಅನ್ನವನ್ನು ಚಿನ್ನಗೊಳಿಸಿ
ಉಣ್ಣ ಬರದ ಹಾಗೆ ಮಾಡಿ ;
ಮನದ ಮನೆಗೆ ಮುಳ್ಳ ಚುಚ್ಚಿ–

ಬೆಳಕಿನೊಂದ ಕಣ್ಣ ಕಳೆದು ;
ಗಾಳಿ ಬಟ್ಟೆಯನ್ನು ಕಟ್ಟಿ
ಪ್ರಾಣ ನಿತ್ರಾಣಗೈದು ;
ಎಲ್ಲ ದೇವರನ್ನು ಬಯ್ದು
ಸ್ವರ್ಗವಾಸಿಗಳನು ಮಾಡಿ ;
ಪಾತಾಳದಿಂದ ನರಕ-
ವನ್ನು ಎತ್ತಿ ಉದ್ಧರಿಸಿ ;
ಶಾಂತಿ ಪಾಠ ಹೇಳುವವರೆ
ಅತ್ತ ಇತ್ತ ಸುತ್ತು ಮುತ್ತು.
ಇದ್ದವರಿಗೆ ಇಹುದು ಎಲ್ಲ
ಇಲ್ಲದವರಿಗಿಲ್ಲ ಇಲ್ಲ.
ತನ್ನ ದುಃಖ ನುಂಗಿಕೊಂಡು
ಅವಳು ಪಸಿವ ಕಳೆಯಬೇಕು
ತಾನೆ ಅತ್ತು ಹಾಡಿಕೊಂಡು
ತನ್ನ ತಾನು ರಮಿಸಬೇಕು.
ಹೆಣಕೆ ಉಂಟು ಮಸಣಬಟ್ಟೆ,
ಜನಕೆ ತಮ್ಮ ಮನೆಯ ಹಾದಿ.
ಅವಳಿಗಾವ ಕೆರೆಯ ದಾರಿ ?
ಹೆಣ್ಣಪಾಡು ನಾಯಿಪಾಡು
ಎಂದುದೆಷ್ಟು ಸಲವೊ ಏನೊ !
ಸುಟ್ಟು ಬರಲಿ ಹಾಳು ಹುಟ್ಟು
ಬೇಡ ಬೇಡ ಹೆಣ್ಣು ಜನ್ಮ
ಬಯ್ದುಕೊಂಡುದೆಷ್ಟು ಸಲವೊ !
ಹೊಟ್ಟೆಯಿಂದ ಬಂದ ಒಂದು
ಮರಳು ಕರುಳು ಇಲ್ಲದಿದ್ದ-
ರೆಷ್ಟು ಒಳಿತು ಆಗುತಿತ್ತು !
ಇಲ್ಲದಿರುವದೊಂದೆ ಒಳಿತು.

ಇದ್ದು ಸುರಿದುಕೊಂಡುದೇನು ?
ಗಂಡು ಹೆಣವು – ಹೆಣ್ಣು ಅಳುವು,
ಬಾಳು ಕಾಡು – ಕೂಸು ಪಶುವು
ಮುಂದೆ ಹೇಗೆ ಮುಂದೆ ಹೇಗೆ
ಒಂದೆ ಒಂದು ಮಾತು ಮತ್ತೆ
ಮತ್ತೆ ಮತ್ತೆ ಒಂದೆ ಮಾತು
ಒಂದೆ ಮಾತು ಒಂದೆ ಚಿಂತೆ
ಹೆಣ್ಣು ಮನದ ಕಣ್ಣು ಮುಂದೆ
ಬಂದು ಅವಳ ಕನಲಿಸುವದು
ಹೊಟ್ಟೆಕಿಚ್ಚು ಹೊತ್ತಿಸುವದು
'ತುಳಿದುಬಿಡುವೆ ಬಾಳನೆಲ್ಲ'
ಎಂಬ ಸೊಲ್ಲು ಹುಟ್ಟಿಸುವದು.
ಆನಂದ ಸ್ಪಂದದಿಂದ
ಹುಟ್ಟಿಬಂದ ಸೃಷ್ಟಿಯಿಂದ
ಇಂಥ ಮಾತು ಹುಟ್ಟಬೇಕೆ ?

•

ಕಾಳಿಯಂತೆ ಕೇಣಗೊಂಡು
ಶಿವನ ಎದೆಯ ತುಳಿಯಲೆಂದು
ಅಡಿಯನೆತ್ತಬೇಡ ತಾಯಿ !
ಬಂದುದೆಲ್ಲದಕ್ಕೆ ನೀನು
ತಲೆಯನೊಡ್ಡದಿರಲು ನಮಗೆ
ನಿಲ್ಲ ನೆಲೆಯು ಎಲ್ಲು ಇಲ್ಲ,
ನಮ್ಮ ಕಾಲ ಹಾದಿ ನೀನು
ನಿನ್ನ ತುಳಿವೆನೆಂದರೇನು ?
ನಿನ್ನ ಮೈಯ ಮಣ್ಣು ನಮ್ಮ
ಮನೆಗಳನ್ನು ಕಟ್ಟುತಿಹುದು
ನಿನ್ನ ಹೊಟ್ಟೆ ಹಣ್ಣು ನಮ್ಮ
ಆಸೆ ಹಸಿವ ತಣಿಸುತಿಹುದು

ಕಾದ ಮೈಗೆ ತಂಪು ನೀನು
ಸೋತ ಮೈಗೆ ಕಾವು ನೀನು,
ಅಳಿದ ಮೈಯ ಮಣ್ಣುಮಾಡಿ
ಮತ್ತೆ ಮೂರ್ತಿ ಕಟ್ಟಿ ತರಲು
ಶಿಲ್ಪಶಾಲೆ ನಿನ್ನ ಬಸಿರು.
ಭೂಮಿತಾಯಿಯಂತೆ ನಿನಗೆ
ತಾಳ್ಮೆಯೊಂದೆ ಬಾಳ್ಮೆಯಹುದು.
ಬಾಳು ಮೊದಲು ಬಾಳು ಕಡೆಯು
ನೀನು ನಮ್ಮ ಬಾಳುಮೆಡೆಯು.
ನೀನು ನರಳಬೇಡ ತಾಯಿ
ನುಂಗು ನುಂಗು ಬಂದ ದುಃಖ.

ನಿನ್ನ ಬಿಸಿಯ ಉಸಿರ ಹಬೆಗೆ
ಸಿರಿಯ ಕುರುಳು ಕೊಂಕಿ ಹೋಯ್ತು.
ನೀನು ನರಳಿ ಮಿಡುಕುತಿರಲು
ಸರಸವೀಣೆ ವಿರಸವಾಯ್ತು,
ನಿನ್ನ ತಾಪದುರಿಗೆ ತಾನೆ
ಸತಿಯ ಮೈಯು ತಣ್ಣಗಾಯ್ತು.
ಮಾಯೆ ಇಳೆಗೆ ಇಳಿವಳೆಂದು
ಮೊನ್ನೆ ಮುಗಿಲು ಗುಡುಗುತಿತ್ತು.
ಹೆಣ್ಣು ಹೊತ್ತು ಬರುವದೆಂದು
ನಿನ್ನೆ ಗಾಳಿ ಹಾಡುತಿತ್ತು;
'ಸ್ತ್ರೀಯೆ ಮನುವು, ಸ್ತ್ರೀಯು ಮನುವು'
ಇಂದು ರವಿಯು ಆಡುತಿರುವ ;
ಹೊಳೆಗಳಲ್ಲಿ ಹರಿಯುತಿಹುದು.
ಹುಡಿಹುಡಿಯೂ ನುಡಿಯುತಿಹುದು.
ಮತ್ತೆ ಮತ್ತೆ ಮಲಗಿಬಿಡುವ
ಅತ್ತಮೇಲೆ ಕಣ್ಣು ತೆರೆವ

ದೇವನೆಂಬ ತಂದೆಯಿನ್ನು
ಮುಗಿಲಿನಾಚೆಯಿಂದ ಬರುವ
ಜಂಬ ಜಂಬರಂಗಳಿಲ್ಲ.
ಭೂಮಿದೇವಿ ಗರ್ಭದಿಂದ
ಇನ್ನು ಅವನು ಹುಟ್ಟಿ ಬರುವ ;
ಅವಳ ಹೊಟ್ಟೆಯಿಂದ ಬಂದು
ದೇವನೆಂಬ ಹೆಸರ ಪಡೆವ.
ನೆಲದ ಮಕ್ಕಳಿನ್ನು ಮೇಲೆ
ದಿವ್ಯ ಲೋಕಗಳನು ಕಟ್ಟಿ
ಪಡೆವ ಪದವ ಇಲ್ಲೆ ಪಡೆದು,
ದೇವ ಗೀವ ಭೇದಭಾವ
ಅಳಿಸಿಬಿಡುವರೆಂಬ ಸುದ್ದಿ
ಬುದ್ಧ ಲೋಕದಲ್ಲಿ ಕೂಡ
ಎದ್ದು ನಿಂತು ಧ್ವಜದ ಹಾಗೆ
ಸಾರುತಿತ್ತು, ಬೀರುತಿತ್ತು.
ಆದಿಮಾಯೆ, ತಾನೆ ತಾಯಿ-
ಯಾಗಿ ಇಂದು ಬರುವಳೆಂದು
ಹೇಳುತಿತ್ತು, ಮೂರು ಲೋಕ
ಕಿವಿಯುಗೊಟ್ಟು ಕೇಳುತ್ತಿತ್ತು.
ಬನದ ತಂಪು ಕಂಪು ಬಾರ
ಮುಗಿಲ ಶಾಂತಿ ಕಾಂತಿ ಬಾರ
ಇರುಳೆ ಕಾಡಿಗೆಯುಸು ತಾರ,
ಸಂಜೆಗೆಂಪು ಗಾಳಿಯಿಂಪು
ಸಿಂಗಾರವಗೊಳಿಸಬಾರ,
ಭೂಮಿತಾಯಿ ಏಳಲಿಪಳು
ತನ್ನ ದಿವ್ಯ ಲೀಲೆಗೆ.

# ತಡಸಲು

ತಡಸಲು ತಡಸಲು ಅಗೊ ಅಲ್ಲಿ.
ದಡದಡ ಎನುವದು ಎದೆ ಇಲ್ಲಿ.
ದಿಡುಗದೊ ಗುಡುಗುಡು ಗುಡುಗುತಿದೆ
ಗಿಡ, ಮರ, ಜನ, ಮನ ನಡುಗುತಿದೆ.
ಗುಡುಗೇ ನೀರಾಗಿಹುದಲ್ಲಿ,
ಮೋಹ ಹುಟ್ಟುತಿದೆ ಮಳೆಯಲ್ಲಿ ;
ತುಂತುರ ಮಳೆ ಹೊಳೆಯಂಚಿಗಿದೆ,
ನೀರೇ ಮಿರಿ ಮಿರಿ ಮಿಂಚುತಿದೆ.
ಮುತ್ತಿನ ಸರಗಳು ಹರಿಯುತಿವೆ
ಗಾಜುಗಂಬಗಳು ಸುರಿಯುತಿವೆ
ಕಾಮನ ಬಿಲ್ ಮಣಿದಾಡುತಿವೆ
ನೀರಿನ ಹೂ ಕುಣಿದಾಡುತಿವೆ.
ನೆಲಮುಗಿಲ್ಗಳ ನಡುವಿನ ಬೆಡಗು
ರಮ್ಯ ಭಯಂಕರವೀ ದಿಡುಗು !
ಅದ್ಭುತ ಕರೆವುದು 'ಬಾ ಇಲ್ಲಿ' ;
ಭಯ ಗದರಿಸುತಿದೆ 'ನಿಲ್ಲಲ್ಲಿ'.
ಮನ ಧುಮುಕುತ್ತಿದೆ ಹೊಳೆಯಂತೆ
ಸ್ತಂಭಿತ ಮೈ ತಡಸಿಲಿನಂತೆ.
ನಿಂತಲ್ಲಿಯೆ ಕಾಲಂಟಿತ್ತು
ಊಹೆ ದಿಗಂತಕೆ ಹೊಂಟಿತ್ತು.

# ಜೀವದ ಗೆಳತಿ

ಬೆರಳು ಬೆರಳುಗಳಲ್ಲಿ, ಕೊರಳು ಕೊರಳಿನಲಿರಿಸಿ
ಸುರುಳುರುಳಿ. ಸುತ್ತಿರುವ ಬಳ್ಳಿಗಳ ಹಾಗಾಗಿ
ಅರಳಿಸುತಲೊಂದೊಂದೆ ಅವಳಿ ಹೂ, ದಿವ್ಯತರ
ದೃಷ್ಟಿಯನು ಪಡೆಯುವಂತೆ

ಭರದಿ ಮೈಮೇಲೆಲ್ಲ ಕಣ್ಣಾಗೆ, ಆಗ ಮೈ -
ಮರೆತು ನೋಡುತ್ತ ನಿಲ್ಲೋಣ ಸ್ವರ್ಲೋಕವನು,
ಪರಸುತ್ತ ಹುಡುಕಿ ಕಂಡಂತೆ ನಮ್ಮಂತಿರುವ
ನಕ್ಷತ್ರದ್ವಂದ್ವಗಳನು,

ಕೈಗೆ ಕೈ, ಮೈಗೆ ಮೈ, ಬಾಯ್ಗೊಡಿಸೇ !
ಸಾಗಿ, ಬಿಗಿತಾಗಿ, ಒಂದಾಗಿ, ಹನಿಹನಿಗೂಡಿ,
ಮಾಗಿ, ಗಡನೊಂದೆ ರಸವಾಗಿ, ಜೀವೈಕ್ಯದೊಳು
ಸಂಗಮಿತ ಹೊಳೆಗಳಂತೆ

ಆಗಿ, ಹರಿಯೋಣ ಬಾ, ಕೂಗಿತೊಂದೇ ಮಾತ,
ನೂಗುತೊಂದೇ ದುಃಖ, ತೂಗಿತೊಂದೇ ಸುಖವ,
ಬಾಗು ಬಾಗಿದ ಹಾಗೆ ಮುಗಿಲನೊಡಲೊಳಗಿರಿಸಿ
ಸಾಗೋಣ ಕೂಡಿ ಕೂಡಿ.

# ಮುದ್ದು

ಅವ್ವಾ ನೋಡಿರೆ ! ಮಲ್ಲಾರಿ ಮಾರ್ತಂಡನ
ಎಲ್ಲರನು ಗೆಲ್ಲಲು ನಿಂತ ಜಗಜಟ್ಟಿಯು.

ಅವ್ವಾ ನೋಡಿರೆ ! ಗುಡ್ಡದ ಕುಮಾರಸ್ವಾಮಿಯು,
ದೇವರ ದಣ್ಣಾಯಕನ,
ಶಾಂತ ಸುಕುಮಾರ ಸುಬ್ಬಯ್ಯನ.

ಅವ್ವಾ ನೋಡಿರೆ ! ಕುಳಿತಿರುವ ರತಿಯಿಲ್ಲದ ಕಾಮಣ್ಣನ
ನನ್ನ ತನುಜನಾಗಿ ಬಂದ ಅನಂಗನ.

ಅವ್ವಾ ನೋಡಿರೆ ! ಜೋಕುಮಾರನ,
ಬಡವರ ಬೆಂಬಲದವನ.
ಸಡಗರದ ಸೆಟ್ಟಿಯು.

ಅವ್ವಾ ನೋಡಿರೆ ! ಸಿಂಗಾರದ ರಂಗನಾಯಕನ,
ಚೆಲುವ ಚೆನ್ನಕೇಶವನ,
ಮಲಗಿದ ಅನಂತಶಯನನ.

ಅವ್ವಾ ನೋಡಿರೆ ! ಭೂವೈಕುಂಠನಿವಾಸಿ-
ವೆಂಕಟರಮಣನ,
ತೆರೆಗೈ ತಿರುಕನ.

ಅವ್ವಾ ನೋಡಿರೆ ! ಮುದ್ದು ವಿಟ್ಠಲನ,
ದಾಸರ ದಾಸನ, ಟೊಂಕದ ಮೇಲೆ ಕೈಯಿಟ್ಟವನ.

# ಆಕಾಂಕ್ಷೆ

ರೆಕ್ಕೆಯ ಕುದುರೆಯನೇರಿ,
ಪಕ್ಕಿಯ ಹಾದಿಯ ಹಿಡಿದು.
ದಿಕ್ಕಿನ ತುದಿಗಿದ್ದ ಚಿಕ್ಕೆಗಳ ನಾಡಿನಲ್ಲಿ–

ಮಾತಿನ ಗಿಳಿಯ ದೂತಿಯ ಮಾಡಿ,
ಪ್ರೀತಿಯ ರಸದ ಗೀತಿಯ ಹಾಡಿ,
ವೇತಾಳರಾಯನಾ ಕೋಟೆಯ ನೋಡಿ–

ರಕ್ಕಸರನ್ನು ಕಾದಿ ಕೊಂದು,
ಬೊಕ್ಕಸವನ್ನು ಸೂರೆಗೊಂಡು,
ಬೆಕ್ಕಸ ಎನೆ ಮೆರೆದು ಬಂದು–

ಮೂಮಲ್ಲಿಗೆಯ ತೂಕದ ಹೆಣ್ಣು
ವಾಲಿಯು ಭಾಂಡಾರದ ಆ ಹೊನ್ನು
ಏಳು ಕಡಲು ಸುತ್ತಿದ ನೆಲವನ್ನು
ಆಳುವನವ್ವಾ ನನ್ನ ಕುಮಾರ !

ನರಲೋಕ ವೀರ ! ದೇಶಕೋಶ ರಕ್ಷಕ ಶೂರ !
ಧರ್ಮದ ಅರಸನಾಗಿ-ದೇವರ ಊಳಿಗದವನಾಗಿ-
ಕಂಟಕರಿಗೆ ಕಾಳನಾಗಿ
ಆಳುವನವ್ವಾ ! ಆಳುವನು !!

# ನಗೆ

ಆಹಾ ! ನಿನ್ನ ಮಿಾಸಲು ಮುರಿಯದ ನಗೆಯೆ
ಸೂಸಲವಾಗಿಹ ನಗೆಯೆ !
ಅಂತರಗಂಗೆಯರಿಯದ ಗಂಗೆ-ನಿನ್ನ ನಗೆ.

ಅದೆ ನಿದ್ದೆಯಿಂದೆಚ್ಚತ್ತಾಗಿನ
ಇನ್ನೂ ಅರಳದಿದ್ದ ನಿನ್ನ ನಗೆಯು
ಎಳನೇಸರಿನ ಥೊಂಬಿಸಿಲ ಕಂದಿಸಿತು.
ನೀನು ಅಳುತಿರುವಾಗಲೆ
ತಲೆದೋರುವ ಮುಗುಳುನಗೆಯು
ಮಳೆಗಾಲ ಸಂಜೆಯ ಹೂಬಿಸಿಲ ಬಾಡಿಸಿತು.

ಮೆಚ್ಚುವಮಾಡಿ ಮೈಮರೆಯಿಸುವ
ನಿನ್ನ ಹುಚ್ಚುನಗೆಯು
ಮಾಗಿಯಿರುಳ ಬೆಳುದಿಂಗಳ ಮರೆಯಿಸಿತು.

ನನ್ನ ಕಂಡು ಕುಣಿಕುಣಿದು
ಕೆಲೆಗೆಲೆವ ನಿನ್ನ ಅಟ್ಟಹಾಸವು
ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸಿತು.

ಆಹಾ ! ವಾತ್ಸಲ್ಯದ ಮಸ್ತಕಮಣಿಯಾದ ನಗೆಯೆ !
ವ್ಯಸ್ತವ ಕರಗಿಸುವ ನಗೆಯೆ !
ಅಸ್ತವನರಿಯದ ಬೆಳ್ಳಿ-ನಿನ್ನ ನಗೆ.

# ಘಜಾರಗಟ್ಟೀ ಮುಟ್ಟೋಣು ಬಾ

ಘಜಾರಗಟ್ಟೀ ಮುಟ್ಟೋಣು ಬಾ
ಹಿಂದಿನ ಆಟ ಮುಗಿಸೋಣು ಬಾ
ಮುಂದಿನ ಆಟ ನಡೆಸೋಣು ಬಾ ॥ ಪಲ್ಲ ॥

ಇದs ಇದs ಅಂತ ಎದೀ ಅನ್ನತದ
ಆದs ಅಲ್ಲಿ ಮನಿ ಕಟ್ಟೋಣು ಬಾ ।
ನೆಲೀ ಮ್ಯಾಲ ನೆಲಿ ಅಲ್ಲ ಸಂಗಿ, ಅದು
ಆದs ನಿಜದ ನೆಲ ಮುಟ್ಟೋಣು ಬಾ ॥ ೧ ॥

ಅಂಗಲಿಂಗದ ಜೋಡಿ ಕೂಡಿ ಹೊಸ
ಗಿಣೀ-ಗೆಣೆತನ ನೋಡೋಣು ಬಾ ।
ಮನಾ ಎಂಬೋ ಹೊಸ ಬನಾ ತೆರದರ್‍ಯ
ಜನ ಕಂಡು ಅದ ಕೂಡೋಣ ಬಾ ॥ ೨ ॥

ಪುಂಡರೀಕ ನಾ, ಮಹಾಶ್ವೇತೆ ನೀ
ಆದಾಂಗಿತ್ತು, ಅದ ನೆನಸೋಣ ಬಾ !
ತುಂಬೂರ ನಾನಾಗಿ ರಂಬೆ ನೀನಾದಾಗ
ಹಚ್ಚೀದ ಬಳ್ಳಿಗೆ ಹಣಿಸೋಣ ಬಾ ॥ ೩ ॥

ಗುರುವಿನಂಗಳದ ಗಿಡಾ ಬಳ್ಳಿಯಾಗಿ
ಹೊಸಾ ಹೂವು ನಾವು ಸುರಿಸೋಣ ಬಾ ।
ತಾಯಿ ಪಾದದಾನಂದ ಗಂಧ ಉಂಡು
ಬೆಂದವರ ಜೀವ ಬೆರಸೋಣ ಬಾ ॥ ೪ ॥

# ಬರುವದೇನೆ ನೆಪ್ಪಿಗೆ

ಬರುವದೇನೆ ನೆಪ್ಪಿಗೆ
ನಮ್ಮ ನಿಮ್ಮ ಒಪ್ಪಿಗೆ
ಎಲ್ಲೊ ಏನೊ ನೋಡಿದೆ
ಹಾಗೆ ಬಂದು ಕೂಡಿದೆ.

ಬೆಳಕು ಬೆಂಕಿ ಬೆರೆತುಕೊಂಡು
ಭಾವವು ಹೊರದೂಡಿರೆ
ಬಾಳು ಪೊಳೆತು ಸುಗ್ಗಿ ನನೆತು
ಹೂವಿನಂತೆ ಮಾಡಿರೆ
ಆಹಾ ಚೆಲುವೆ ! ಎಂದು ಕುಣಿದೆ
ಮಿಕ್ಕ ಸಂಜೆ ಮಬ್ಬಿಗೆ
ಓಹೊ ಒಲವೆ ! ಎಂದು ಕರೆದೆ
ಪಲ್ಲವಿಸಿದ ಹುಬ್ಬಿಗೆ.

ಅದು ಏನ ಬೇಡಿದೆ
ಏನ ನೆನಸಿ ಹಾಡಿದೆ
ಬರುವದೇನೆ ನೆಪ್ಪಿಗೆ
ಎದೆಗೆ ಎದೆಯು ಅಪ್ಪಿಗೆ.

ಬರುವದೇನೆ ನೆಪ್ಪಿಗೆ
ಕೂಡಿದೊಂದು ತಪ್ಪಿಗೆ
ಏನೊ ಏನೊ ನೂತೆವು
ಬದುಕಿನೆಳೆಗೆ ಜೋತೆವು

ಮೋಡದೊಂದು ನಾಡಿನಲ್ಲಿ
ಮಳೆಯು ಮಿಂಚು ಕಂಡೆವು
ಯಾವ ಫಲಕೆ ಇಳಿಯುತಿತ್ತೊ
ಮಣ್ಣ ಬೀಜ ಉಂಡೆವು
ದುಃಖದೊಂದು ಶೂಲೆಯಲ್ಲಿ
ನೋವುಗೊಂಡು ತಿಣುಕಿದೆ
ಸುಖದ ತೊಟ್ಟು ತೊಟ್ಟಿಗಾಗಿ
ಹತ್ತು ಕಡೆಗೆ ಹಣಿಕಿದೆ.

ಇಬ್ಬಗೆಗೂ ಸೋತೆವು
ಆಸರಾಗಿ ಆತೆವು
ಬರುವದೇನೆ ನೆಪ್ಪಿಗೆ
ಹೊರತಾದೆವು ಉಪ್ಪಿಗೆ.

ಬರುವದೇನೆ ನೆಪ್ಪಿಗೆ
ನಾವು ಬಿದ್ದ ಟೊಪ್ಪಿಗೆ
ತಲೆಯು ತೆರೆದು ಬಾದಿತು
ಎಚ್ಚರೆಚ್ಚರೆಂದಿತು.

ಯಾವ ಲೋಕದಿಂದಲಿಳಿದೊ
ಹೊಸ ಸುಗಂಧ ಬೀರಿದೆ
ರಣೋತ್ಸಾಹ ಕಹಳೆಯಂತೆ
ನವಚೇತನ ಊರಿದೆ.
ಇಬ್ಬರನ್ನು ನೂಗಿಕೊಂಡು
ಒಬ್ಬನಾಗಿ ಎದ್ದಿದೆ
ಚಿತ್ರವೆಲ್ಲಿ ಎನುವಾಗಲೆ
ಕೊಡುವ ಮೊದಲೆ ಕದ್ದಿದೆ.

ಸಲ್ಲುವಲ್ಲಿ ಸಂದಿದೆ
ನಿಲ್ಲುವಲ್ಲಿ ನಿಂದಿದೆ
ಬರುವದೇನೆ ನೆಪ್ಪಿಗೆ
ಜೀವ ಜೀವದಪ್ಪಿಗೆ.

# ಮಂಗಳಾ

ಬೆಳಕು–ತೊರೆ ತೂರಿ ತೆರೆ
ಕಣ್ಣಂಚಿಗೆ ಬಾಗಿರೆ
ದಿನವು ಬಿದಿಗೆ ಇದ್ದ ಹಾಗೆ
ಚಂದ್ರಸೋರೆಯಾಗಿರೆ,

ನಗೂ ನಗೂ ಹಾಗೆ ನಗು
ಆಡು ಮಗಳೆ ಮಂಗಳಾ
ತುಂಬಲಿ ಮನೆ ಸುರಿಯಲಿ ಸೊನೆ
ಸೂಸುತಿರಲಿ ಅಂಗಳಾ.

ಮರವು ನಾವು, ನೀವು ಹೂವು
ನಮಗೆ ನಲಿವು ನೀವಿರೆ
ಇರಲಿ ನೀರು ಕಪ್ಪೆ, ಕೆಸರ
ಸಾಕು ಇರಲು ತಾವರೆ.

ಸ್ವರ್ಗ, ಮಕ್ಕಳಾಟ ಕಂಡು
ಹಿಗ್ಗ ಬಲ್ಲ ಕಂಗಳೇ
ಮಗುವಿನ ನಗೆ ಮಗುವಿನ ಬಗೆ
ಮಗುವಿನ ಜನ ಮಂಗಳೇ.

ರತ್ನ ಧವಳ ಮುತ್ತು ಹವಳ
ಹಾಗೆಯೆ ಹುಸಿ ನಕ್ಕರೆ
ತುಟಿಯಲೇನು ಜೊಲ್ಲು ಜೇನು
ನಿನ್ನ ಬೆಲ್ಲ ಸಕ್ಕರೆ.

# ಸಂಜೀಯ ಜಾವಿಗೆ

ಮಂಗಲೆಯೊಂದಿಗೆ । ಹಿಗ್ಗಾಗಿಯುತ್ತ ತಂದೆಗೆ
ಕುಣಿಸ್ಯಾಡಿ ಕೂಸಿಗೆ । ಅರಳಿಸಿ ಆಸೆಗೆ ॥
ರಾಗದ ಸಾಟಿಗೆ । ತೂಗ್ಯಾಡೊ ಥಾಟಿಗೆ॥
ಒಲಿದಾಡೊ ರೀತಿಗೆ । ಹಾಡ್ಮಾನೊ ಗೀತಿಗೆ ॥
ಸಂಜೀಯ ಜಾವಿಗೆ । ಹೊರಟೀದಿ ಬಾವಿಗೆ ॥

ಸಂಜೀಯ ಜಾವಿಗೆ । ಹೊರಟೀದಿ ಬಾವಿಗೆ ॥
ಕಿರಗೀಯ ನೀರಿಗೆ । ಒದೆಯೂತ ದಾರಿಗೆ ॥
ಗೆಜ್ಜೀಯು ಗೆಜ್ಜಿಗೆ । ತಾಕ್ಯಾವ ಹೆಜ್ಜಿಗೆ ॥
ಏನಾರ ನಡಿಗೆ । ಯಾವೂರ ಹುಡಿಗೆ ॥
ಸಂಜೀಯ ಜಾವಿಗೆ । ಹೊರಟಾಳ ಬಾವಿಗೆ ॥

ಎರಡೂನು ಸಾಲಿಗೆ । ಹಾದ್ಯುದ್ದ ಬೇಲಿಗೆ ॥
ಗುಲಬಾಕ್ಷಿ–ಮಲ್ಲಿಗೆ । ಕೇಳ್ಯಾವೊ ಕಲ್ಲಿಗೆ ॥
'ಕಳಿಸೋದೆ ನೀರಿಗೆ । ಇಂಥ ಸುಕುಮಾರಿಗೆ ॥
ಚಾಚ್ಯಾವಂಗಾಲಿಗೆ । ಮುಚ್ಚಂಜಿ ನಾಲಿಗೆ' ॥
ಸಂಜೀಯ ಜಾವಿಗೆ । ಬಂದ್ಯಲ್ಲ ಬಾವಿಗೆ ॥

ಮಾತೀಗು ಆಚೆಗೆ । ಮೀರಿದ್ದ ನಾಚಿಗೆ ॥
ಮುಸುಕ್ಯಾವ ಹೂವಿಗೆ । ಬಂದೀಯೆ ಬಾವಿಗೆ ॥
ಗಿಲುಕೆಂಬೊ ಬಳಿಗೆ । ಕೆಲಸೊಂದು ಗಳಿಗೆ ॥
ಗೆಳತೀರ ಒಂದಿಗೆ । ಸೇದಿದೆ ಬಿಂದಿಗೆ ॥
ಸಂಜೀಯ ಜಾವಿಗೆ । ಬಂದೀಯೆ ಬಾವಿಗೆ ॥

ಮೂಗಿನ ನೇರಿಗೆ । ಹೊರಳೀದೆ ಊರಿಗೆ ॥
ತಲಿಮ್ಯಾಲೆ ಬಿಂದಿಗೆ । ಕಾಲಾಗ ಅಂದಿಗೆ ॥
ತುಂತುಮುಕು ತುಂಬಿದೆ । ಬಿಂದೀಗೆ ಅಂತಿದೆ ॥

ರ್ಝಣ್‌ರ್ಝಣ ಅಂದಿಗೆ । ಅಂದಾವ ಹೊಂದಿಗೆ ॥
ಸಂಜೀಯ ಜಾವಿಗೆ । ಹೋಗಿದ್ದೆ ಬಾವಿಗೆ ॥

ಒಂದೇನೆ ಬಾರಿಗೆ । ಹೋದೆ ಸೀ-ನೀರಿಗೆ ॥
ಬೆವರೀನ ಸಾರಿಗೆ । ತಂದೀದಿ ಯಾರಿಗೆ ॥
ಇಬ್ಬನಿ ಹೂವಿಗೆ । ನಸುಕೀನ ಜಾವಿಗೆ ॥
ಮುತ್ತನಿ ಮಾರಿಗೆ । ಮುತ್ಯಾವೊ ನಾರಿಗೆ ॥
ಸಂಜೀಯ ಜಾವಿಗೆ । ಹೋಗಿಯು ಬಾವಿಗೆ ॥

ಕೆಲಸಾನ ಆಟಿಗೆ । ಮಾಡೂವ ಸೂಟಿಗೆ ॥
ಹಸನಾದ ಧರತಿಗೆ । ಮೆಚ್ಚಿದೆ ಗರತಿಗೆ ॥
ಕುಣಿಸಿದೆ ಇಂದಿಗೆ । ಕಣ್ಣಿಟ್ಟ ಮಂದಿಗೆ ॥
ನೀವಾಳಿ ದಿಟ್ಟಿಗೆ । ಕಣ್ಣಿಲ್ಲ ಒಟ್ಟಿಗೆ ॥
ಸಂಜೀಯ ಜಾವಿಗೆ । ಹೋಗಿದ್ದೆ ಬಾವಿಗೆ ॥

ಮಂಗಲೆಯೊಂದಿಗೆ । ಹಿಗ್ಗಾಯ್ತು ತಂದೆಗೆ ॥
ಕುಣಿಸ್ಯಾಡಿ ಕೂಸಿಗೆ । ಅರಳಿಸಿ ಆಸೆಗೆ ॥
ರಾಗದ ಸಾಟಿಗೆ । ತೂಗ್ಯಾಡೊ ಧಾಟಿಗೆ ॥
ಒಲಿಬಾಡೊ ರೀತಿಗೆ । ಹಾಡ್ಯಾನ ಗೀತಿಗೆ ॥
ಸಂಜೀಯ ಜಾವಿಗೆ । ಹೊರಟೀದಿ ಬಾವಿಗೆ ॥

# ಸಖೀ ನಮ್ಮ ಸಖ್ಯದ ಆಖ್ಯಾನ

ಸಖಿ ನಮ್ಮ ಸಖ್ಯದ ಆಖ್ಯಾನ ಮುಗಿದಿಲ್ಲ
ಗುರುಸೇವೆ ಉಳಿದಿದೆ ಇನ್ನೂನೂ
ಒಂದೇ ಧಾಟೀಲೆ ಸಮರಸ ಸಾಟೀಲೆ
ಒಂದೇ ಭಜನೆಯ ಅನ್ನೋಣು

ನಿರ್ಮಲದ ಆಧಾರ, ಝುರಣೀಯ ಕಣಹಾರ
ಮಣಿಯ ಸ್ವಾಧಿಷ್ಠಾನದಾಽದ್ವಾರಾ
ಹೃದಯದ ಮಾರುತನ ಅಜಪ್ಯಾಜಪಸಾರಾ
ಬಾರವ್ವಾ ನೀನೆ ವಾರಂವಾರಾ

ಹುಬ್ಬಿನ ಬಳ್ಯಾಗ ಹಬ್ಬಿಸಿದಿ ಕಂಠದ
- ಅಕುಂಠಿತವಾದ ಬಯಲಸ್ವರಾ
ವಾಲ್ಮೀಕಿ ತಾನಮರಾ, ವ್ಯಾಸಗೆ ಆದೆ ತವರಾ
ಕಾಳಿದಾಸನ ಕಿವಿಗೆ ಆದ ಭ್ರಮರಾ

ಸಾವಿರದ ಗುಟ್ಟೀಲೆ ಲಕ್ಷದ ಹೊಟ್ಟೀಲೆ
ದೇವಕೋಟಿಯು ಧಾಟೀ ಭಾಸ್ವರಾ
ಕಣ್ಣೀರ ಮಿಕ್ಕೀಸಿ ನಿನ್ನೀರ ಉಕ್ಕೀಸಿ ಉದಿಸಿದಾ
ಉದರಽದ ಭಾಸ್ಕ್ವರಾ.

ತಸ್ಕರರ ಬದುಕಲ್ಲಾ ಅಪಮೃತ್ಯು ಉತ್ತರಿಸಿ
ಉತ್ತಮಿಕೆ ಬಾಳಿಸು ಚಿತ್ತಾರಾ
ಎತ್ತಾರ ಪತ್ತಾರ ಹೊಂದಿಸಿ ಛಂದಿಸಿ
ಪಾಕ ಮಾಡಿದ್ದೆಲ್ಲಾ ಆಹಾರಾ.

ಹಗಲಾಗಿ ಹಡಿಸೀದಿ ಹೊತ್ತೆಲ್ಲಾ ಸುತ್ತೆಲ್ಲಾ
ನಿನ್ನ ಬಲಗಣ್ಣಾಗಿ ಮೆರೆಸೀದಿ.
ಮೂರೂಸಂಜೀಮುಂದ ನಿನ್ನ ಎಡಗಣ್ಣಾಗಿ
ತಿಂಗಳ ಬೆಳಕನ್ನ ಉರಿಸೀದಿ.

ಬಂಗಾರ ಕಣ್ಣಾಕಿ ಮೂರನೆ ಹೊಡೆ ನೋಟ
ತಾವರಿಯದಂತೆಯಂಕುರಿಸೀದಿ
ಹಸುಗೀಗೆ ಬೇಸಿಗೆಯೇ ನಿನ್ನೊಸಗೆ ನಿನಗಾಗಿ
ಉಸುರುಸುರಿಗೆ ಹಿಗ್ಗಿ ಹರಿಸೀದಿ.

ಚಿಲ್ಲಿರೆ ಮುರಿಸೀದಿ, ಮಕ್ಕಳ ಹರಿಸೀದಿ
ತಪತಪ ಮೆಯ್ಯನ್ನೆ ಒರೆಸೀದಿ.
ಕರೆಸೀದಿ ಎದುರೀಗೆ ಇದಮಿತ್ಥಂ ಎಂದಂದು
ಹಿಮನಗದ ಹೃದಯದಿ ಕೊರೆಸೀದಿ.

ನಿನ್ನ ದಂಡಕವನ್ನೇ ನಿನ್ನ ಕಮಂಡಲು
ಆದ್ದೆದ್ದಿ ನಿದ್ದೀಲೆ ಬರೆಸೀದಿ
ನವಗ್ರಹ ನವನೀತ ನಿನಗಾಗಿ ಹೊಸಬೆಣ್ಣೆ
ನೈವೇದ್ಯ ನಿನ ಮುಂದ ಇರಿಸೀದಿ.

ಸಖಿ ಏಳು, ಬಂತೇಳು, ಅಧಿಕ ತೀರುತ್ತಲೆ
ತಾಯಿ ಕಳಿಸಿರುವಂಥ ನವ ಶ್ರಾವಣಾ
ಶಿವವಾಸ, ಹರಿವಾಸ, ಅರವಿಂದರ ಧ್ಯಾಸ
ಅವರ್‍ಯಾ ಭಜನೆಗೆ ಇದು ಭಾಜನಾ

ಸಖಿಸಖಿಯ ಜೋಕಾಲಿ ಬಿದ್ದಾವೇನೇ ಖಾಲೀ
ಏಕಪಾತ್ರದಲಿ ರಸಭೋಜನಾ
ಜಾತಿಜನಾಂಗಕ್ಕೆ ಪ್ರೇಮ ಕಲ್ಪದ ನೀತಿ
ಯೋಜನೆಗೆ ಸರಿಯಾಗಿ ಹೊಸ ಯೋಜನಾ

ಇದೇ ತಿಂಗಳಲ್ಲಿ ನೀ ಮೊದಲ ಮಂಗಲಗೌರಿ
ಕಟ್ಟಿದೆ ತೋರಣಾ ಪೂ ಪೂಜನಾ.
ತಾಯಿ ಇದ್ದಳು ಆಗ ; ಜೋಡಿಗೆ ಆಗಾಗ
ಪಾರಿವಾಳದ ಗುಟುರು ಕೂ ಕೂಜನಾ.

ಲಘು ನಮ್ಮ ಜೀವನಾ ಗುರುಭಾರ ಹೊತ್ತಿತ್ತು
ಎತ್ತೆತ್ತೋ ಹೊರಟಿತ್ತು ಗುರಿಮುಟ್ಟಲು.
ಗುರುವೆ ಭಾರವ ಹೊತ್ತು, ಲಘು ಜೀವನವನ್ನೆ
ಪಲ್ಲಟಿಸಿ ಬಿಟ್ಟನು ಒಳ ಹುಟ್ಟಲು

ಮಾತಿನ ಮಾತೆಯ ಸೆರಗನ್ನೆ ಸರಿ ಹಿಡಿದು
ಮಾಡೋಣು ಶ್ರೀಮಾತಾ ಸನ್ಮಾನಾ
ಸಾಧನಾ ಗೀತಕ್ಕೆ ಸುಸಮಾನಾ ಯಾವುದು
ಸಹಜಕ್ಕೆ ಬೇಕಿಲ್ಲಾ ಹುಸಿ ಧ್ಯಾನಾ.

ನೀನಾಗು ಕಿನ್ನರಿ, ನಾನು ಕಿನ್ನರನಾಗಿ
ಬಾರಿಸಿ ನೋಡುವೆ ಸಂಧಾನಾ
ನೀ ದೇವಗಾಂಧಾರಿ ದೇವಗಂಧರ್ವ ನಾ
ದನಿ ಎತ್ತಿ ಹೇಳುವೆ ನವಗಾನಾ.

# ತಾನಾದಳೋ ತಾಯೀ

ತಾನಾದಳೋ ತಾಯೀ
ನಾನೋ ಬರೇ ಬಾಯೀ । ಕಿವೀ
ಸಖಿ ಹೃದಯಾ । ಕವೀ ॥

ಸಹಸ್ರಮುಖೀಯೋ ನಮ್ಮ ಸಖೀ
ಊರ್ಧ್ವಮುಖೀ, ನಾ ದಿವ್ಯ ಶಿಖೀ
ಏರು ಬಾ ಕುಮಾರಾ । ದೇವ ಸೇನಾನಿ
ಸೋಮಾಗ್ನಿ ದ್ವಾರಾ । ತಾನೇ ಎಲ್ಲಾ ನಾನೀ
ಅಬ್ಜಾಯಿತ । ಸಹಸ್ರಾರಾ ।
ಲಕ್ಷಾ ಕೋಟಿ ಆನೀ ಆನೀ
ಸಾವಿರದಾ ರಾಜಧಾನೀ
ಸಖೀ । ಸಾಕ್ಷೀ । ಪ್ರೇಕ್ಷಕೀ । ಯಕ್ಷೀ
ಲಕ್ಷಾನುಲಕ್ಷಿ-ಲಕ್ಷ್ಮೀ
ಸಮಾ ನಿನಗ್ಯಾರು ? ಮೂರ್ಛನಾ । ಇಳಿವು ಏರು

ಕೆಳಗೂ ಮೇಲೂ ನಡುವೂ
ಸುತ್ತೂ ಎಂಟೂ ದಿಕ್ಕಿಗೂ
ಹನ್ನೆರಡೂ ರಾಶೀ ಹಾರಾ
ಇನ್ನೆರಡೂ ರಾಶೀ ಲೋಕಾಪೂರಾ
ನೆರೆ ಬಂತು ನೆರೆ । ತೆರೆ ತೆರೆದು ತೆರೆ
ಓ ಉಷಾ ಪಾತ್ರಧಾರೀ
ಸೂರ್ಯಕುಮಾರೀ
ಎಲ್ಲಾ ನರ ನರ ನಾರೀ
ಮಗಮಗಿಸಿತು ಭಾರೀ
ಮಣ್ಣೆಲ್ಲಾ ಮಲ್ಲಿಗೆ
ಎದೆಮಿಡಿತ ಕಲ್ಲಿಗೆ

ಅಲ್ಲಿಂದಾ ಇಲ್ಲಿಗೇ
ಎಲ್ಲೆಲ್ಲೂ ಎಲ್ಲೆಗೆ
ಮಾತಾಯಿಯಾದಳೋ
ಸಹಸ್ರ ಗೋಪೀ ಸಖೀ
ಈ ಸಖೀಯಾದಳೊ
ತಾಯಿಯಾತೆಯೆ ಸುಖೀ.

# ಹೋಽದ ಬುಧವಾರಾ ಬರಽಽಽಽಲೊಲ್ದು

ಹೋಽದ ಬುಧವಾರಾ ಬರ    ಲೊಲ್ದು

ನೀ ಬುದಿ ; ನಾ ಗುರು
ಶುಕ್ರವಾರ ಲಕ್ಷ್ಮೀ ಸುದ್ದಿ
ಶನೀಗೆ ಏನು ಗೊತ್ತು ?
ಅವನಿಗೆಲ್ಲಿ ಶುದ್ಧಿ ?

ರವೀ ಬೆಳಕಿನ್ಯಾಗ
ಸೋಮಾ ! ನೀನಽ ಇದ್ದಿ
ಮಂಗಳವಾರ ಕೂಡಿತು ಸಂತಿ.
ಹರೀತು ಸಂತಿ.

ರಾತ್ರಿ ಆತು ; ಬೆಳಕ್ಽ ಆಗಲಿಲ್ಲ.
ಒಬ್ಬರ ಹೆಗಲಮ್ಯಾಲೆ ಒಬ್ಬರು
ಶುಕ್ರ, ಗುರು, ಬುಧ, ಮಂಗಳ ಎಕ್ಕೆಕ್ಕಿ ನಿಂತಿದ್ದರು
ತಿಂಗಳ ಮೊಗ ನೇಸರಿಗೆ ಕಂಡಿತ್ತು
ಮೂಡಲ ಕೆಂಪ ಸೆರಗಿಗೆ
ಮೂಡೋ ಮಾರಿ ಅಡಗಿತ್ತು.

ನೀ ಹೊರಗ ಬಿದ್ದಿ
ಅಂತ ಪುಕಾರಽ ಆತು
ನೀ ಒಳಗ ಇದ್ದೀ
ಅಂತ ಪಿಸು ಮಾತು.

ತವರು ಮನೀಗೆ ಹೊರಡೋ
ಸಡಗರವೇ ಸಡಗರ
ಮಲ್ಲಿಗೀ ಮಾಲಿ ತುರುಬಿಗೆ
ಅರಿಶಿಣಾ ಕುಂಕುಮಾ ಗಲ್ಲಾ, ಹಣೀ

ಹೊಸಾ ಸೀರಿ, ತುಂಬಿದ ಉಡಿ
ಉರಿಯೋ ಹಸೆ-ಮಣೆಗೆ ಹೊರಟಿತ್ತು ಸವಾರಿ
ಶ್ರಾವಣಕ್ಕ ಹೊಸಾ ಹರೆ.

ಬಿಲ್ವಪತ್ರ ಮಲವಂಲಾ ಅಂತಿತ್ತು
ಡೇರೆ, ಗುಲಾಬಿ, ಕಾಬಾಳಿ
'ಗಮುಗಮಾ ಗಮಾಡಿಸ್ತಾವ ಮಲ್ಲಿಗಿ
ನೀ ಹೊರಟೀದೀಗ ಎಲ್ಲಿಗಿ'
ನೆನಪಿನ ಕಲ್ಲಿಗೆ ಕವಣೆ ಬೀಸಿದರು
ಎದ್ದಿತು ಏಳು ಸಾಲಿಗೀ ಉರೀ
ಹೊಗೀ ಸುಳಿದಾಡಿತು ತನ್ನ ಪರೀ

ಬೆಂಕಿ, ಕೆಂಡ, ಬೂದಿ
ಬೂದೀ ಕೆದರಿದರ ಸಿಗೋದೇನು ?
ಬಳಿ–ಬಳಿ–ಬಳಿ
ಯಾರ ಬಳಿ ?

ಹೋದ ಬುಧವಾರ ಹೋತು
ಬರೋ ಬುಧವಾರ ಬರಲೇ ಒಲ್ಲದು.

# ಅಮವಾಸಿ ದಾಟಿತ್ತು

ನೆಲವೆಲ್ಲಾ ಮಲೆ ಮಲೆ, ಕಾಲಿಗೆ ಜಲಹರಿ
ತಲೆತುಂಬ ತಿಂಗಳಿನ ಅಭಿಷೇಕವು
ಕುರು-ಬೆಟ್ಟ, ಗುರು–ಬೆಟ್ಟ, ಹೆಜ್ಜೆ ಹೆಜ್ಜೆಗೆ ನೆಟ್ಟಾ
ವರ್ಷಾ ವರ್ಷಾ ಪರಸಿ ದಿನಮೇಖವು.

ಮಾಲೆಗಾರನ ತೋಟಾ, ಮಾಲೆಗಾತಿಯ ರಾಟಾ
ನಾ ಮೇಲೆ ನೀ ಮೇಲೆ ಏರಾಟವು.
‘ಆ’ ನಿನ್ನ ಮಲ್ಲಿಕಾ ‘ಈ’ ನನ್ನ ಮಾಲತೀ
‘ಊ’ಮಾಳ ಹಕ್ಕಿಗೆ ಹಾರಾಟವು.

ಪೈಪಾಲು, ಕೈಪಾಲು, ನಲ್ಮಲೆ ಕಲ್ಮಲೆ
ಶಾಲ್ಮಲೆ ಶಿಲೆ ಶಿಲೆ ‘ಶ್ರೀ’ ಗಿರಿಯು
ಹರನ ಸುತ್ತೂ ಹರಿಯು, ಹರಿಯ ಸುತ್ತೂ ಹರನು
ಹಿಗ್ಗಿತ್ತು ಹರವಾಗಿ ಹಿರಿಸಿರಿಯು.

ಮಾಲಕ್ಕೀ ಹಕ್ಕೀಗೆ ಮಾಲೀಕ ಚದರುವನೆ?
ಚದುರಂಗ ಅಷ್ಟಾಂಗ ಧೂಪವಿದೆ.
ಹನ್ನೆರಡು ಕಾಲಕ್ಕು ಹೊತ್ತಿನ ಸೊಡರಾಗಿ
ಹತ್ತೂಗೊತ್ತಿಗೆ ನೆತ್ತಿ ದೀಪವಿದೆ.

ಕವಿಗಂಟಿ ಸವಿಗಂಟಿ ಭವಗಂಟಿ ಭವಿಗಂಟಿ
ಯಾಕುಂಟೆ ಈ ಕಂಟೆ ಎನಲಿದೆಯೇ ?
ಇದ್ದಲ್ಲಿ ಇದೆ ಹೃದಯಾ, ವಾಸನಾಂತಃಸದಯಾ
ಆರೆನಾರಿಯಾದವಗೆ ಹದಿದೆದೆಯೇ?

ಗುಪ್ತಗಂಗಿಯ ಸೆಲೆ ಸಾಗರವ ನೆಲೆ ಬೆಲೆ
ಲಕ್ಷ ದೀವಿಗೆಯಾಗಿ [illegible]

ನನಗೂ ನಿನಗೂ ಹಬ್ಬದ ನಂಟಿದು
ಮಲ್ಲಿಗೆಯುಂಟಾಗಿ ಗಂಟೊಡೆಯಲಿ.

ಶರಣಶಯ್ಯೆಯ ಮೇಲೆ ಶ್ರೀ ಅರವಿಂದರು
ಚರಣಶಯ್ಯೆಯ ಮೇಲೆ ನೀನೊರಗಿರೆ
ಮರಣದ ನಾಣ್ಣುಡಿ, ಹರಡಿ ರಾಜ್ಯದೊಳಿಲ್ಲ
ಹದಿನಾರು ಕಲೆಯಾಗು 'ಕಣಿ' ಮೊರೆದಿರೆ.

ಕಣ್ಮುಚ್ಚಿ, ಕಣ್ತೆರೆದೆ; ಅಮವಾಸಿ ದಾಟಿತ್ತು
ಅಧಿಕವು ಸಮವಾಗಿ ಶ್ರವಣವಿರೆ
ಗ್ರಹಗಳ ಸರಮಾಲೆ ಮೂಡಲ ಕೊರಳಿಗೆ
ಈ ಸರಿ ಸಮಯಕ್ಕೆ ಪವಣವಿರೆ.

ಹದಿನೇಳು ಸಂಖ್ಯೆಯು ಜೀವನದಂಕೆಯು
ಸಿಂಹಕ್ಕೈ ರವಿ ಬಂದ ನಿಜಮಾಸಕೆ.

# ಮತ್ತೆ ಬಂತು ಶ್ರಾವಣಾ

ಸಂವತ್ಸರ ಸೂರ್ಯಪಾನ
ಅಭಿಜಿನ್ಮನ ಊರ್ಧ್ವಧ್ಯಾನ
ಧ್ರುವಮಂಡಲ ಭಕ್ತಿಗಾನ
ಸರೆಗಮಪದ ಏಕತಾನ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ

ದಿನ ದಿನಾ ನವೀನ ಜನನ
ಗಗನ ಗಹನ ಯಂತ್ರ ಘನ
ನ ಮಮ ನಮೋ ಮಂತ್ರ ಮನ
ತನು ತಾನೆನೆ ತಂತ್ರ ತನ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ

ತನು ಮನ ಘನ ಪ್ರಾಣಿಯಾಗಿ
ಜತೆಗು ನಾಗವೇಣಿಯಾಗಿ
ಪಥದಲಿ ತತ್‌ತ್ರಾಣಿಯಾಗಿ
ಬಿನ್ನಾಣದ ಶ್ರೇಣಿಯಾಗಿ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ

ಖಗ ನಗ ಜಗ ಸಂಮುಖ
ಬಾಚುವ ರವಿ ಕಿರಣ ನಖ
ತಮದ ಬಸಿರೊಳಮರ ಮುಖ
ನಿರಂತರದ ಸಖ–ಸಖಿ–ಸುಖ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ

ರಾಧಾ ಧರ ಸುರಿಯುವಲ್ಲಿ
ಯಮುನಾ ಜಲ ಹರಿಯುವಲ್ಲಿ
ವೃಂದೆಯ ಚಿತೆ ಉರಿಯುವಲ್ಲಿ
ತುಲಸಿಯು ಒಡಮುರಿಯುವಲ್ಲಿ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ

ಸಖೀ ಸ್ಮರಣ ಮುಕುರದಲ್ಲಿ
ಮಂಗಲ ಮುಖ ದೂರದಲ್ಲಿ
ಆ ಮಿಲಿಂದ ತೀರದಲ್ಲಿ
ಮಧುರಸ್ಮಿತ ಪೂರದಲ್ಲಿ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ.

ಬ್ರಹ್ಮರಂಧ್ರ ಗೀತಾಗಮ
ಬೆನ್ ಬಿದಿರಿಗೆ ಧ್ವನಿ ಸಂಗಮ
ಶೇಷ ಶ್ವಾಸ ಸಮ ಘಮ ಘಮ
ಜೀವ ಭಾವ ಹೃದಯಂಗಮ
ಬರುತಲಿಹುದು ಶ್ರಾವಣಾ
ಮತ್ತೆ ಬಂತು ಶ್ರಾವಣಾ.

# ಸಖೀಗೀತ

೧೯೩೭ ಸಖಿ! ನಮ್ಮ ಸಖ್ಯದ ಆಖ್ಯಾನ ಕಟು-ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ?

ಇರುಳು-ತಾರೆಗಳಂತೆ ಬೆಳಕೊಂದು ಮಿಸುಗುವದು
ಕಳೆದ ದುಃಖಗಳಲ್ಲಿ ನೆನೆದಂತೆಯೇ
ಪಟ್ಟಪಾಡೆಲ್ಲವು ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿವೆ.

ಸಪ್ಪೆ-ಬಾಳುವೆಗೀತ ಉಪ್ಪು ನೀರೂ ಲೇಸು
ಬಿಚ್ಚು ಸ್ಮೃತಿಗಳ ಹಾಯಿ ಬೀಸೋಣ ಬಾ.
ಬೀಸೋಣ ಈಸೋಣ ತೇಲೋಣ ಮುತ್ತಿನ
ತವರ್ಮನೆ ಮುಟ್ಟಸು ಮುಳುಗೋಣು ಬಾ

ತಾಂಡವ ನಡೆಸಿದ ಝುಂಝಾವಾತದ
ಕಾಲಿನ ಹುಲುಗೆಜ್ಜೆ ನಾವಾಗಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

೧೯೧೯ ಮಾಂದಳಿರ ತೋರಣ ಹೂಮಿಡಿ ಗುಡಿಗಟ್ಟಿ
ಮಧುಮಾಸ ಹೊರಟಿತ್ತು ನಿಬ್ಬಣಕೆ
ಚಂದಿರದೇವನ ಮುಗಿಲ ಮಂದಿರದಲ್ಲಿ
ಕಣ್ಣೆದಿರು ಕೌಮುದಿ ಕುಣಿಯುತ್ತಿರೆ

ಮಂತ್ರದತಂತ್ರದ ಮಂದಿವಾಳದ ಮದುವೆ
ಸಂದಣಿಯಲಿ ಹೇಗೋ ಮೆರೆಯುತಿರೆ
ಅಂತಃಪಟಪಾಚೆ ವಿಧಿ ತಂದ ವಧು ನೀನು
ಮಾಲೆಯ ಸಾವರಿಸಿ ನಿಂತಿದ್ದೀಯ.

ಮುತ್ತಿಗು ಮಿಗಿಲಾಗಿ ಹೂವೀಗು ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತನು ನಾಚಿಸಿ ಬೆವರಿನ ಹನಿಯೊಂದು
ಮೂಗುಬಟ್ಟಿನ ಅಂದ ಮಿನುಗುತಿರೆ.

ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನಿಕ್ಕುತ ಮಡದಿಯಾದೆ;
ನಾಟಿಸಿ ಕಣ್ನೋಟ ಸೋಕಿಸಿ ಕೈಬೆರಳು
ಮರವಟ್ಟ ಮನ-ಬನ ಚಿಗುರಿಸಿದೆ.

ಕಿವಿಮಾತ ಸೊಗಸೇನು ಆಡಿದ್ದಾಡುವದೇನು
ಹಳಿಸದ ಮುದ್ದಾಟ ಒಸಗುತಿರೆ
ಸವಿ ಬಂತು ಮುನಿಸಿಗು, ಕಳೆ ಬಂತು ಕನಸಿಗು
ಮೋಹದ ಮಾಟವನೆಸಗುತಿರೆ.

ಹಗಲೆಲ್ಲೊ ಹಾರಿದವು ಇರುಳೆಲ್ಲ ಜಾರಿದವು
ಋತು ನಿದ್ದೆಯಾಡಿದವು ಬುಗುರೆಯೊಲೇ
ನಗೆಯ ನೊರೆಯ ಕೆಳಗೆ ಮೊರೆವ ಬಯಕೆಯ ಕಡಲು
ತೆರೆತೆರೆ ತೆರನಾಗಿ ತೆರೆಯುತಿರೇ

ನನೆಕೊನೆ ಕಾತಿತು ಅತ್ತೆಯ ಸೊಸೆ-ಮುದ್ದು
ಚೊಚ್ಚಿಲಬಸಿರಿ ನೀ ಎದೆ ತೆರೆದೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾವಾಕ್ಷಿಯೋ!



ಅಂತಃಪಟದಾಚೆ ವಿಧಿ ತಂದ ವಧು ನೀನು, ಮಾಲೆಯ ಸಾವರಿಸಿ ನಿಂತಿದ್ದೀಯೆ

—'ಸಖೀಗೀತ'

೧೯೨೩–೨೨ ಬಡವರ ಸಿಂಗಾರ ಬಯಕೆಗೆ ಮೂಲವು
ನವಮಾಸ ಅಲಸಿಕೆಯಲಿ ಕಳೆದೇ
ಹುಡುಗನ ಜೋಗುಳ ಮುಗಿಲ ಮುಟ್ಟುವದಿತ್ತು
ಮಿಂಚಿತು ಕಾರ್ಯವು ನೀನುಳಿದೇ

ಮೊದಲಿನ ಫಲವೊಂದು ಮಿಾಸಲು ಮಣ್ಣಿಗೆ
ಎಂಜಲುಗೊಳುತಿತ್ತೊ ಮುದ್ದಿಸಿರೆ
ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ
ಕಣ್ಣೆಂಜಲು ಮಾಡಿ ಮಸಣದೊಳೆ

ಕನಸಿಗು ಹೊಳೆಯದ ಬರಸಿಡಿಲೆರಗಿತು
ತಾಯಿ–ಗಿಡವು ಛಾಯವಾಯಿತಲೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿ:ಃ!

* * *

ನೆಲೆ ತಪ್ಪಿದ ಹಕ್ಕಿ ಅಲೆವಂತೆ ಮುಗಿಲಲಿ
ಹತ್ತು ದಿಕ್ಕಿಗೆ ನಾನು ಹಾರಾಡಿದೆ
ಒಲವಿಗೆ ಹುಡುಕಾಡಿ ಬಾಳಿಗೆ ಮಿಡುಕಾಡಿ
ಷಡ್ರಸ ನವರಸ ರುಚಿ ನೋಡಿದೆ.

ಕೂಸಿನ ಹೊಸ ತಾಯಿ ನಸುಮಾಯು ಬೀಸುತ
ನೀನು ನನ್ನೊಡನಿಂತು ಒಲೆ ಹೂಡಿದೆ
ಮಿಾಸಲು ಮುರಿಯದ ಒಲವಿಗೆ ಬಾಯ್ಬಿಡದೆ
ಕಣ್ಣೊಡ್ಡಿ ಹುಡುಮಿನ ಸವಿ ಬೇಡಿದೆ

ಬಾಳಿನ ಬೆಂಕಿಗೆ ಮೈ ಬೆಂದು ಮನ ನೊಂದು
ಒಲುಮೆಯ ಒಲುಮೆಯ ಕುಲುಮೆಯಲೇ
ತಾಳಿಕೆ ಬರುವಂಥ ಉಕ್ಕಾಗಿ ಬರುತಿರೆ
ಮುಕ್ಕಾದ ಮೊನೆಯಾಗ ಮಸೆಯುತಿದೆ

ಮಿನುಗುವ ಮಿಂಚಾಗಿ ಮುಂಚಿನ ಕೈಧಾರೆ
ಕಣ್ಣೀರಲಾಗಾಗ ತೊಳೆಯುತಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ !

* * *

ಮಗುವಿನ ನಗುವೊಂದು ನಮಗಿದ್ದ ನೆಚ್ಚೊಂದು
ಬಾಳಿನ ಹುಚ್ಚೊಂದು ಮೆಚ್ಚಿಂದೆವೇ
ಹಗಲಷ್ಟು ಹುಡುಗಾಟ ಇರುಳಿಗೆ ಬೆಡಗಾಟ
ಕಪಿಯಾಗದಿದ್ದದ್ದೇ ಹೆಚ್ಚೆಂದೆವೇ.

ನಿನ್ನಡೆ ಕರೆಯುವಿ ನೀ ನನ್ನ ಮತ್ತೆನ್ನ
ಕನ್ನಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗದು ಆಗಲಿಕೆ
ಮೌನದರಣ್ಯಕೆ ನೀ ಬದರಿದೇ

* * *

'ನವಿಲೇ ನವಿಲೇ ಮಳೆ ಬಂದಾಗೆಲ್ಲಿದ್ದೆ?'
'ತಿರುಮಲೆರಾಯನ ತೋಪಿನೊಳೇ!'
ಕವಿದಿರೆ ಕತ್ತಲು ಮನವೊಂದು ಇತ್ತಲು
ಕೇಕೇ ಹಾಕಲುಬೇಕು ಕೇಳಿಯೊಳೆ

'ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲ?'
'ಹೋಗಿದ್ದೆ ಬನವಾಸಿ ಕಾನನದೊಳೆ'
ಸೊಗಕೊಂದು ತಾವುಂಟು, ಋತು ಬದಲಾದರೇ-
ನೆಮಗೆಮ್ಮ ಚಿತ್ತರದ ಭೂಮಿಯೊಳೇ.

'ತಾಯಿ ಕಾಣದ ಜೀವ ತಾಪುರಿ ಬಾಪುರಿ'
ಎಂದೆನಲು ಕಂಬನಿ ಒಡೆಯುತಿರೆ
ಹಾಯಾಗಿ ಹಾಡಿದೆವು 'ಆಡಿ ಬಾ ಎನ ಕಂದ'
ಬೇರೊಂದು ತಂತಿಯು ಮಿಡಿಯುತಿರೆ

ಮನದಾಡುಂಬೊಲದಲ್ಲಿ ಮೈಮರೆತು ಕೂಡಿದೆವು
ಚಿತ್ರಗಳಾದೆವು ಚಿತ್ರದೊಳೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಬಗೆ–ಬಾನ ತುದಿಯಿಂದ ನಡುನಡುವ ಮುಗಿಲೊಂದು
ಕಿಡಿಗೇಡಿಯೊಲು ಏಕೋ ಗುಡುಗುತಿರೆ
ನಗೆಯಾಡ ಹೊಗೆಯೇರಿ ಸುಡಿಯಲ್ಲಿ ಕಿಡಿ ಹಾರಿ
ನಮ್ಮೆದೆ ತಾನಾಗಿ ನಡುಗುತಿರೆ

ಜನುಮಕು ಮರಣಕು ಒಳಸೂತ್ರ ಇರುವುದ
ಕಂಡಾಗ ಇತಿಮಿತಿಯಾಯ್ತೆನಗೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಸುಗ್ಗಿಯು ಬರುವಾಗ ತರುವದು ಸಂಗಡ
ಮಾಂದಳಿರ ಮಲ್ಲಿಗೆ ಮೊಗ್ಗುಗಳ
ಅವು ತರುವವು ಗುಂಗಿ ಗುಂಜಾರವವನು
ಕೋಗಿಲೆಯ ಪಂಚಮದಿಂಚರವ

ಸುಖ ತಾನು ಬರುವಾಗ ಗುಳೆ ಎತ್ತಿ ಬರುವದು
ಒಂದಲ್ಲ ಎರಡಲ್ಲ, ಪರಿವಾರವ:
ಕಂದನ ಕಿರಿಕಿರಿ ಕಿಲಿಕಿಲಿ ನಗುವಾಗ
ಹೊಸಮನೆ ಗಮಗಮ ಎನ್ನುತಿರೆ

'ಜಯಕರ್ನಾಟಕ'ವೆನ್ನುತ ಗೆಳೆಯರ....
ಕನ್ನಡದಾಸೆಯು ಗುಡಿಕಟ್ಟಿತು
ಮುಂದಿನ ಏನೇನೋ ಕನಸಿನ ಕಳಸ ಗೋ-
ಪುರಗಳ ಕಲ್ಪನೆ ಮೇಲೆಟ್ಟಿತು.

ಮಲೆನಾಡ ಸೆರಗಿನ ನೆರಗಿದ್ದ ಮನೆಯೊಂದು
ಮಮತೆಯ ಕುರುಹಾಗಿ ತಾ ದೊರಕಿತು
ಅಲ್ಲಿ ಸಂಪಿಗೆಯಿತ್ತು ಪಾರಿಜಾತಕವಿತ್ತು
ಮಾವು ಮಲ್ಲಿಗೆಯಿತ್ತು ಮನೆಯೆದಿರು

ಮುಗಿಲ–ಮಲ್ಲಿಗೆಯಿತ್ತು ತೆಂಗಿತ್ತು ಹಲಸಿತ್ತು
ನಿಂಬಿಯ ಇಂಬಿತ್ತು ಎಡವಡೆಗೆ
ಹೊಂಗೆಯ ಸಾಲಿತ್ತು ಕಣ್ಮುಂದೆ ಕೆರೆಯಿತ್ತು
ಗುಡ್ಡದ ನೆರೆಯಿತ್ತು ಆದೆರಾಚೆಗೆ

ಋತುಗಳ ಪರಿಳಿತ ಕಾಳ ರಿಂಗಣಗುಣಿತ
ಬಿಡಿಬಿಡಿಸಿ ಬರೆದಂತೆ ಚಿತ್ರದೊಳು
ಬಡವರ ಅಲೆದಾಟ, ಹೊಟ್ಟೆಯ ಬೆಂಬತ್ತಿ
ಗುಳೆಯೆತ್ತಿ ಹೊರಟವರ ಹೋರಾಟವು

ದುಡಿವರ ತಿರುಕರ ಕೂಲಿ ಕುಂಬಳಿಯುವರ
ಜೀವನ ಮೂಡಿರೆ ಹಾದಿಯೊಳೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಅಲ್ಲಿರುತಿರಲಾಗಿ ಸಹಜವಾಗಿಯೆ ನನ್ನ
ದೃಷ್ಟಿಯು ನಟ್ಟಿತು ಸೃಷ್ಟಿಯೊಳು
ಮಳೆಯಾಕೆ ಚಳಿಯಾಕೆ ಭೂಮಿಯ ಬೆಳೆಯಾಕೆ
ಬಿಸಿಲಾಕೆ ನನ್ನಾಕೆ ನೆರೆಯಾದರು

ಗಾಳಿಯ ಹಾರಾಟ ಏರಾಟ ಜೀರಾಟ
ಭೋರಾಟ ಕುಣಿದಾಟ ತುಳಿದಾಟವು
ಎಳೆದಾಟ ತೂರಾಟ ಎಲೆಗಳ ಕಳೆವಾಟ
ಸುಟ್ಟುರೆಯ ಗಾಳಿಯ ಹುಡಿಯಾಟವು

ಛಂದೋಗತಿಯ ಚೆಂದ. ತಾಳ-ಲಯದಾನಂದ
ಸ್ವಚ್ಛಂದ ಬಂಧವ ಕಲಿಸಿದವು
ನಾಡ ಬಳಕೆಯ ನುಡಿಗೆ ಸೋತಿದ್ದ ಮನವನು
ಹಾಡಿನ ಮೋಡಿಗೆ ಒಲಿಸಿದವು.

* * *

ಹೋಳಿಹುಣ್ಣಿವೆ ಬಿಸಿಲು ಕಾಮನ ಸುಡಲೆಂದು
ತೆರೆದಿದ್ದ ಉರಿಗಣ್ಣ ತೆರದಲಿರೆ
ಬೇಳುವೆಯೊಳಗಿಂದ ಬೆಳಕೆದ್ದು ಬಂದಂತೆ
ಬಾಳುವೆಯು ಸುಳಿಯೊಂದು ಸೀಳಿ ಬರೆ

ಮಾವೆಲ್ಲ ಕಾಶಿತ್ತು ಮಲ್ಲಿಗೆ ಹೂತಿತ್ತು
ಕೋಗಿಲೆ ಕೂತಿತ್ತು ಕಾಣದೊಲೆ
ಕಾವಿನ ಕಾಹುರಕೆ ಸುಗ್ಗಿಯ ನೇವುರವೊ
ಘೈ ಜುಮ್ಮು ರುಮಜುಮು ಎನ್ನುತಿರೆ

ದಿಕ್ಕು ದಿಕ್ಕಿಗೆ ಸುಗ್ಗಿ ಪಂಚಮದಿಂಚರ
ಮುತ್ತಿಟ್ಟು ಮರುಮರುಳಿ ಬರುತಲಿರೆ
ಮಲಮಲ ಎನ್ನುವ ಮಲ್ಲಿಗೆಯಂದದಿ
ಚಿಗುರು–ಪ್ರಾಯದ ಮನ ಮಲರುತಿದೆ.

ಹೋಮ–ಧೂಮಗಳಲ್ಲಿ ಉರುಳಿದ ಕಂಬನಿ
ಗಲ್ಲದಲ್ಲಿಯು ಆರಿಹೋಗುತಿವೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಆಷಾಢದ ಮುಗಿಲು ಬೀಸಾಡಿ ಬಂದವು
ಈಸಾಡಿ ಬಂದಂಥ ಆನೆಗಳೇ
ರೋಷದ ತೋಷದ ಬೆಡಗು ಬಿನ್ನಾಣವ
ಬೀರುವ ಬಿಂಕದಿ ಮೆರೆಯುವೊಲೇ

ಬಂದಿತು ಶ್ರಾವಣ ಹೃದಯ ವಿದ್ರಾವಣ
ಕಾನನ ಕಾವಣವಾಗುತಿರೆ
ಪಡುಗಾಳಿ ಹಾಡಿತು ಗಿಡಬಳ್ಳಿ ಆಡಿತು
ಹೊಲ–ಹುಲ್ಲು ನೋಡಿತು ಲೀಲೆಯೊಳೆ

* * *

ವರ್ಷಾಕಾಲದ ಭಾಷೆಗೆ ಭಾಷ್ಯಕೆ
ಬರೆದ ವಾರ್ತಿಕದಂತೆ ಕಾರ್ತಿಕವು
ತಿರುಳಿತ್ತು ಹುರುಳಿತ್ತು ತೆನೆತೆನೆ ತೋರುವದು
ಬಂಡಿಗು ಸವಿಯಿತ್ತು ನೆಲಹೊಲವು

ಕೃತ್ತಿಕೆಯ ಮಣಿಹಾರ ಕೊರಳಿಂದ ಬಿಡಿಸಲು
ಬಿಳಿಮುಗಿಲ ಹಡಗನ್ನೆ ಇರುಳುಟ್ಟಿತ್ತು
ಮೃಗಶಿರದ ಮಂಚಕೆ ಚಂದಿರ ಬರುವಾಗ
ಚಂದ್ರಿಕೆಯ ವಾತ್ಸಲ್ಯ ತೂರೆಬಿಟ್ಟಿತ್ತು

ಲೋಕದ ಅನ್ನವು ಲೋಕದಂತೆಯು ತಾನು
ಹಂಪುಗಾಲದ ಬೆಳೆಯು ಹಾಲುಂಡಿತ್ತು
ಬಾಂದಳದ ಬೆಳ್ಳಿಗೆ ಭೂಮಿಯ ಬಂಗಾರ
ಸಿಂಗಾರ ಮೊಗವೆತ್ತಿ ಮುದ್ದಿಟ್ಟಿತ್ತು.

ಶಾರದ-ಶುಭ್ರಾಭ್ರ-ಶಾರದೆ ರಸದುಂಬಿ
ನಡೆಸಿದ ನವಿಲಿನ ನರ್ತನವೋ
ಕಾರ್ತಿಕಸ್ವಾಮಿಯು ತಾರಕನ ಗೆದ್ದಾಗ
ತಾರಗೆ ಹಚ್ಚಿದ ಕಾರ್ತೀಕವೋ

* * *

ಪೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು
ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ
ಮನೆ ನಡುಗಿ ಮನ ನಡುಗಿ 'ಏ ಹುಡುಗ', ಎಲೆಹುಡುಗಿ
ಏನ್ನುವ ಸಲುಗೆಯು ಬೆಸುಗೆ ಬಿಡೆ

ಮಕರಸಂಕ್ರಾಂತಿಗೆ ಮೈತುಂಬ ತುಟಿತುಂಬ
ಎದೆತುಂಬ ಕುಸುರೆಳ್ಳು ಮೂಡುತಿದೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಕಾಮನ ಹುಣ್ಣಿಮೆ ಹಣ್ಣಾಗಿ ಹರಿವಂತೆ
ತೊರೆಯಾಗಿ ನೆರೆಯಾಗಿ ಹೊನಲಾಗಿರೆ
ಸೀಮೆಗೆ ಸೀಮೆಯು ಹುಚ್ಚು-ಬೆಳುದಿಂಗಳದ
ಹಸದಸದಲಿ ಅಚ್ಚ ಹಸನಾಗಿದೆ

ಬಡವ-ಬಲ್ಲಿದನೆಂಬ ಭೇದವದಿಲ್ಲದೆ
ಹಾದಿ-ಬೀದಿಗು ಸಂದಿಗೊಂದಿಯೊಳೆ
ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ
ಮಿಣುಕು-ತಾರೆಗಳಲ್ಲಿ ತುಳುಕುತಿಹೆ

ಮೊದ್ದು ಮಾನವರೆಲ್ಲ ನಿದ್ದೆಯೊಳಿದ್ದಾಗ
ಸದ್ದಿಲ್ಲದೆ ಕದ್ದು ಮುದ್ದಿಡುವೆ
ಮುಗ್ಧ ಮಾತೆಯ ಹಾಗೆ, ಎದೆಹಾಲ ಎರೆಯುವ
ಚಂದ್ರಲೋಕದ ತಾಯಿ ಬೆಳುದಿಂಗಳೇ!

* * *

ಋತುಗತಿಯ ತತಿಯಲ್ಲಿ ಹದಬೆದೆ ಕಂಡೂಡು
ಹವಣಾಗಿ ನಡೆದಿತ್ತು ಬಾಳುವೆಯು
ಕಾಲಮಾನದ ಹಾಗೆ ತಾಲಮಾನವ ಪ-
ಲ್ಲಟಿಸುತ್ತ ಹೆಜ್ಜೆಯ ಹಾಕುವೊಲು

ಪಾದ ಪದ್ಧತಿಯಲ್ಲಿ ಪದ ಕೂಡಿ ಬರುವಾಗ
ಯಾರಾರೆ ಗುರು-ಲಘು ಎಣಿಸುವರೆ ?
ಯಾ ರಾಗವೆಂದರು ಯಾರಾಗ ಕೇಳುವರು
ಅನುರಾಗವನುರಣಿಸಿ ತಣಿಸುತಿರೆ

ಶಿವನ ಕುದುರೆಯನೇರಿ ಶ್ರಾವಣದ ಹಸರಾಣಿ
ಹೂಗಣ್ಣ ತೆರೆದಾಡಿ ಕುಣಿಯುವ್ರೊಲು
ನನ್ನ ಚಿತ್ರಕ ಶಕ್ತಿ ಉತ್ಪ್ರೇಕ್ಷೆಯನೇರಿ
ಬಣ್ಣಬಣ್ಣದ ಬಣ್ಣನೆಗೆ ಒಲಿದಿತು

ಯಾವುದಕೆ ಯಾವುದು ಸರಿದೊರೆಯೆನ್ನುತ
ತನ್ನ ಗರಬಣ್ಣಗಳನ್ನೊರೆದಚ್ಚಿತು
ಮನದಲ್ಲೆ ಮೂಲೋಕ ರಚಿಸುವ ಊಹೆಯು
ತನ್ನ ಚಿಂತನದಲ್ಲೆ ತಾ ಮುಳುಗಿತು.

ಕೊಟ್ಟದ್ದೆ ರೂಪವು ಇಟ್ಟದ್ದೆ ನಾಮವು
ಕಟ್ಟದ್ದೆ ಹುರುಳೆಂಬ ಮದದೊಳಿರೆ
ಬ್ರಹ್ಮಪಟ್ಟವನೇರಿ ರೂಪಕ-ಶಕ್ತಿಯು
ಸೃಷ್ಟಿಯನಳೆದಿತು ದೃಷ್ಟಿಯೊಳೆ

* * *

ಹೆಣ್ಣು ಗಂಡಿಗೆ ಚೆಲುವು, ಗಂಡು ಹೆಣ್ಣಿಗೆ ಒಲವು
ಇದುವೆ ಹಣೆಗೆಯು ಒಲವು ಮೂಲೋಕಕು
ಎಂಬೆನೇ? ನಂಬೆನು! ಕೂಗಿತು ಕೋಗಿಲ
ಕೇಕೆ ಹಾಕುತ ಕೇಕಿ ಕುಣಿದಾಡಿತು

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು
ರೂಪ-ಲಾವಣ್ಯಕೆ ಅಳೆಯಲುಬಾರದು
ಅವುಗಳೆ ಇದರೊಂದು ಕಣವಿಹವು

ಎಲ್ಲಿಂದೊ ಬಂದೊಂದು ಸೌಂದರ್ಯ-ಝರಿಯಿಂದ
ಎದೆ ಎದೆಗು ಕಾರಂಜಿ ಪುಟಿಯುತಿದೆ
ಯಾರಿಂದೊ ಚಲಿಸುವ ಪ್ರಾಣದ ಸೂತ್ರವು
ಪುರುಷ-ಪ್ರಕೃತಿಗಳನ್ನು ಕುಣಿಸುತ್ತಿದೆ

ಘನರಸ ಆನಂದ; ಆನಂದ ಪ್ರವರಸ
ಯಾವದೊ ಕಾವಿಗೆ ಆಗುತಿದೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

'ಕುಣಿಯೋಣು ಬಾ' ಎಂದು ಪ್ರಣಯದೋಲೆಯನೊಂದು
ಎದೆವಾತಿನಿಂದೆದೆಗೆ ನಾನಟ್ಟಿದ್ದೆ
ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ
ಗಾಳಿಗೋಪುರವೊಂದು ನಾ ಕಟ್ಟಿದ್ದೆ

ಒಳಗಿದ್ದ ಪ್ರಕೃತಿಗೆ ಒಳದನಿಯೊಂದಾಗ
ಅಂತರ್ಮುಖವಾಗಿ ಕರೆಯುವದೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲಿ
ಮೂಕ-ಮೌನವು ಒಂದು ಶಾಪದೊಲು
ತಾಪವ ಕೊಡುವದು, ತಾ ಪರಿಹರಿಸದು
ಜೀವಯಾತನೆಯನ್ನು ಅದು ಎಂದಿಗು

ನನ್ನ ಚಿತ್ತದೊಳಿರುವ ಚಿತ್ರಗಾರನು ಬರೆದ
ಚಿತ್ರಕೆ ಬಹದೆಂದೂ ಜೀವಕಳೆ ?
ಅದು ಬಂದ ದಿನದಿಂದ ಮಾತು ಮೌನಗಳಲ್ಲಿ
ಹಾಸಾದ ಹೊಕ್ಕಾದ ಉಸಿರಿನೆಳೆ

* * *

ಮೋಹನದಾಸನ ಉಸಿರಿಗೆ ಬೀಸಿದ
ಬಿರುಗಾಳಿಯಾಗ ಸುಟ್ಟುರೆ ತಂದವು
ಒಣ-ಎಲೆ ಹುಡಿ-ಮಣ್ಣು ಸೊಪ್ಪು-ಸವದಿಗಳೆಲ್ಲ
ಮೋಡಗಳಾಡುವ ಎಡೆ ಕಂಡವು

ಹುಡುಗರು ಹುಚ್ಚಾಗಿ ತರುಣರು ಮೆಚ್ಚಾಗಿ
ಮುದುವರು ಪೆಚ್ಚಾಗಿ ನೋಡಿದರು
ಹಲಕೆಲವು ತಾವೆ ಪುಕ್ಕ—ಹಕ್ಕಿಗಳಂತೆ
ದಿಕ್ಕುಪಾಲಾಗುತ ಓಡಿದರು.

‘ನರಬಲಿ’ ಕವನವು ಬಲಿಮಾಡಿತೆನ್ನನು
ಹಳವನಿದ್ದಲ್ಲಿಗೆ ಹೊಳೆ ಬಂದಿತು
ಮನೆಯನು ಮುರಿದಿತು ಹಾರು ವಿಹಂಗಮ!
ಜಂಗಮ—ದೀಕ್ಷೆಯು ನಿನಗೆಂದಿತು.

ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಿಗೆ
ಮುಗದದ ಮಲೆಗಾಳಿ ಮುಂದೆಳೆದಿತು
ಆಳುವರ ಮೇಲೊಬ್ಬ, ಆಳುವನಿರದಿರೆ
ಹಾಳಾಗಿ ಹೋಗಿತ್ತು ಈ ಜಗವು

* * *

ಸಂಸಾರಯಾತ್ರೆಯು ಸಾಗರದೊಡನಾಟ
ಲವಣೋದಧಿಯಲ್ಲಿ ಜಲ-ಪಯಣ
ಎಲ್ಲಿಗೈತಂದರು ಬರದೊಂದು 'ಬಂದರು'
ಪೃಥ್ವಿಪ್ರದಕ್ಷಿಣೆಯು ನಿತ್ಯಕ್ರಮ.

ಉರಿಗಾಳಿ ಬಿರುಮಳೆಗಳಿಗೆಲ್ಲ ಎದೆಗೊಟ್ಟು
ತಿಮಿತಿಮಿಂಗಲಗಳನೆದುರಿಸಿಯೂ
ಒಬ್ಬರನೊಬ್ಬರು ಕೊಂದು, ತಂತಮ್ಮವರ ತಿಂದು
ಕೊನೆಗೇನು? ಹಡಗೊಡೆಯು ಜಲಮುಕ್ತಿಯು.

* * *

ಕೊನೆಗೊಮ್ಮೆ ಬರುವಂಥ ಕಾಳರಾತ್ರಿಯು ಬಂದು
ಹಗಲಿಗೆ ಇರುಳನು ಹೊದೆಯಿಸಿತು
ತಳ-ಪಾಯ ಅದುರಿತು, ಕೆಲಸವು ಕೆದರಿತು
ಗೆಳೆತನ ಮುದುರಿತು, ಮನ ಬೆದರಿತು

ಮಿಡಿತೆಯು ಉಪಟಳ ಹೊಲದುದ್ದ ಬರುವಂತೆ
ಬಂದಿತು ದುಃಖವು ದಂಡಿನೊಲು
ತನೆಗಳ ಚೆಂಡಾಡಿ, ಕಾಳುಗಳ ಚೆಲ್ಲಾಡಿ
ಕಣವನೆ ರಣ ಮಾಡಿ ನಗೆಯಾಡಿತು.

ಸಾವು ಸಂಕಟಗಳು ಘೋರ ನವೆದಾಟವು
ಒಟ್ಟಾಗಿ ನಿಂತವು ಬವಣೆಗಳು
ಸತ್ತ್ವಪರೀಕ್ಷೆಯ ಯಾವ ಅಧ್ಯಾಯವು
ಪ್ರಾರಂಭವಾಯಿತೊ ಇಂದೆಂದೆನು

ಕೆಲವೊಬ್ಬ ಗೆಳೆಯರ ವಿಶ್ವಾಸ, ಒಬ್ಬಿಬ್ಬ
ಗೆಳೆಯರ ನೆರೆಯೊಲವು ಕಾಯದಿರೆ
ಆಗೀಗ ಸಖಿ ನೀನು ನಸುನಕ್ಕು ದುಃಖಿದಿ
ದುಃಖವ ಹಗುರಾಗಿ ಮಾಡದಿರೆ.

ಕಾಯುವ ಕರುಳೊಂದು ಬೆಂಗಾವಲಿರದೆಯ
ದೇಶಾಂತರದಲ್ಲಿ ಬದುಕಿದೆನೇ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

೧೯೩೩–೩೫ ಪುಣೆಯಲ್ಲಿ ಕಳೆದಂಥ ಅಜ್ಞಾತವಾಸವ
ನೆನೆದರೆ ಮೈಯೆಲ್ಲ ಜುಮ್ಮೆನ್ನುತ
ಮುಗಿದದ ದಿನಗಳ ಮರೆಯಿಸಿಬಿಡುವವು
ನಿನ್ನ ನಿರಾಶೆಯು ಕೊನೆಮುಟ್ಟುತ

* * *

ಸಾಕ್ಷಿಯಾಗುತ ಪುರುಷ ಈಕ್ಷಿಸಬಹುದೆಮ್ಮ
ಅಕ್ಷಿನಿಮೀಲನದೆದೆಮರುಳು
ಪ್ರಿಯಳ ಸಮಾಗಮ ನಿಮಗೊಂದು ನೋಟವು
ನಮಗದು ಸಮರಸ ಸಂಗಮವು.

'ಜೀವನ ರಣರಂಗ ನಮಗಿದೆ ನವರಂಗ
ಅಲ್ಲಿ ಸಾವಿನ ಸಂಗ ದಿನದಿನವು
ಆ ಶ್ರುತಿಗೆ ಜೀವದೇವ ಪ್ರಾಣ-ಪ್ರಗಾಥಕೆ
ಆ ಮಹಾತಾಲ ಭಾವದ ಲಯವು

* * *

'ಜೇಡದ ಬಲೆಯಾಗಿ ತೋರುತಿಹುದೀ ಪ್ರೇಮ
ಗಾಳಿಯ ನೂಲೆತ್ತಿದದರೆಳೆಯು
ಪ್ರೇಮ-ಪ್ರಸಾರದ ಸ್ನೇಹದ ಸಾರದ
ಅಂಟನಂಟಿಸುವದು, ನುಡಿನೋಟವು

ಯಾರಿಗೂ ತೋರದ ಏತಕೂ ಬಾರದ
ಈ ಜಾಲ ಜಗದಗಲ ಬೀಸಿಹುದು
ಮರುಳಾದ ನೊಣವನ್ನು ನೊಣೆಯೆ ಸಂಭ್ರಮವೆಷ್ಟು
ಪಿಕಿಹುದೊ ನೂರಾರು ಕೈ ತೆರೆದು!'

ಹೀಗೆಂದು ಹಿಂಜರಿದು ನಿನ್ನೊಳಗೆ ಹುಗಿದಾಡಿ
ಕರುಳನೆ ಬಗೆದಾಡಿ ಕಂಗೆಡದೆ
ಕಣ್ಬಿಟ್ಟು ಕರುಣೆಯಲಿ ಅರುಣ-ದೃಷ್ಟಿಯ ತೆರೆದು
ನೋಡು ನಸುಕು ಹರಿಯುವದೀಗಳೇ

* * *

'ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲಿನೆಡೆ
ನಸ್ನದೆ ತಿರುಗಿದ ಗಂಗೆಯು ಹರಿದಂತೆ
ಜನಜೀವನದಂತೆಯು ನೆಲದ ಕಡೆ

ನಿಮ್ಮದೆ ಎತ್ತರಕೆ ನಾವೇನು ಬಂದೇವು?
ಕಲಿತವರ ಬೆಡಗಿಲ್ಲ ನಮ್ಮ ಕಡೆ;
ನಿಮ್ಮ ಕಣ್ಮುಂದೆಯೇ ಕಣ್ಮುಚ್ಚಿದರೆ ಸಾಕು
ಗೆದ್ದೆವು' ಎಂದೇ ನೀ ಕಣ್ಮುಚ್ಚಿಯು.

* * *

ನಿಮ್ಮ ಮಾತೇ ಬೇರೆ, ಮನ ಬೇರೆ, ಜನ ಬೇರೆ
ರಸ ರುಚಿ ಬೇರೆ, ಜೀವನ ಬೇರೆಯು
ನಿಮಗೆಮ್ಮ ಸಹವಾಸ ವನವಾಸದಂತೆಯು
ನಮ್ಮ ಹುಚ್ಚರ ಮಾತು ಹುಡುಗಾಟಿಗೆ

ಏಕೆಂದು-ಸಾಕೆಂದು-ಬೇಕೆಂದು—ನೂಕೆಂದು
ರಮಿಸಲಾಡಿದಿರಲ್ಲ ನಿಮ್ಮಿಷ್ಟಕೆ
ಗಂಗೆಯ ಕಷ್ಟವು ಗೌರಿಗೆ ತಿಳಿಯದು
ಹೆಂಗಸಿನ ಕಷ್ಟವು ಗಂಡಸಿಗೆ

* * *

ಎಂದಿನಿಂದಲೊ ಏನೋ ಒಳಗೊಂದು ಸಖ-ಜೀವ
'ಸಖಿ! ಬ್ಯಾರೆ ಬಾ!' ಎಂದು ಕೂಗುತಿದೆ
'ಮುಂದಿನ ಪಥದಲಿ ಸಖಿಯಾಗು ಬಾ!' ಎಂದು
ನನ್ನ ಮನೋರಥ ಕೂಗುತಿದೆ

ಬಾನಿಂದ ಬಾನಿಗೆ ಹಾಡಿನ ತಾನೊಂದು
ಸಖಿ-ಸಖಿ-ಸಖಿಯೆಂದು ಕೂಗುತಿದೆ.
'ನಾನೂ ನೀನೂ ಸಖ-ಸಖಿ ಸಮ-ಸುಖಿ'
ಎಂದೆನುತ ಮುಂದಕೆ ಹೋಗುತಿದೆ.

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆಯುದು
ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ-
ದ್ದೀಪನವಾದುದೆ ಜೀವನವು.

ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ
ರಸಗಂಗಾನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ.

ನಾದದ ಸೆಳೆಮಿಂಚು, ಸಮತೆಯ ಗೆಳೆಸಂಚು
ಎಸಳಿನ ಎಳೆಯಂಚು ಎಳೆದೀತೇನೆ ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಒಲ್ಲೆ ಒಲ್ಲೆಂದರು ಲಲ್ಲೆಯ ಮಾತಿವು
ಲಾಲಿತ್ಯವನುಸರಿಸಿ ಎಲೆ ಲಲನೆ!
ದೇಸಿಯ ನುಡಿಗೊಪ್ಪು ದೇಸಿಯ ಛಂದದಿ
ನವನಾಗಬಂಧದಿ ಇವು ಬಿಗಿದಿವೆ

ಗರತಿಯರೆದೆಮಾತು, ನೆರೆಮಾತುಗಳ ಬೆರೆತು
ಲಾವಣಿಯಲಂಕಾರದಲಿ ಹೊಂದಿದೆ
ಪಂಡಿತ–ಪಾಮರರಿಬ್ಬರ ನಾಲಿಗೆ–
ಯೊಳು ಒಡಂಬಡುವಂತೆ ರಂಜಿಸಿದೆ

ಏಕಾಂತದ ಜೆಸುಗು ಲೋಕಾಂತಕೆಳೆಯಿತು
ಜನವು ಜನಾರ್ದನನೆಂದರಿತೇ!
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

* * *

ಅಕ್ಕರ ಛಂದವು ಸಾಂಗತ್ಯ—ಸಂಸ್ಕಾರ
ಹೊಂದಿಲ್ಲ ಬಂದಿದೆ ಹೊಸಹೊಸದು
ಅಕ್ಕರೆಯದಾಯಿತು ಅಕ್ಕರಿಗರಿಗೆಲ್ಲ
ಅಕ್ಕುವಿಕ್ಕೆನುವಂತೆ ಕೊನೆವರೆಗು

ಬೆಳದಿಂಗಳಿರುಳಲಿ ಗಮಕದ ತಿರುಳಲಿ
ಯಮಕದ ಯತಿದೋರಿ ಪದಿನುಡಿದು
ಕುಣಿತದ ಹಾಡಿದು ಕುಣಿಯಹಚ್ಚಿತು ಜನಕೆ
ಕಲ್ಲಾದ ಮನಗಳ ಕರಗಿಸಿತು.

ಅಂಬಿಕಾತನಯನ ಜಂಭದ ಹಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ
ಪೂರ್ವಾನುರಾಗವೀ ಪರ್ವಕೆ ಸಂದಿತು
'ಉತ್ತರೋತ್ತರವಿರಲಿ ಉತ್ತರಕೆ!

ಕಲ್ಯಾಣ—ಶಕ್ತಿಯ ಕೈಯ್ಯ ಕುಶಲತೆಯಿಂದ
ಪಾಕವಾಗಲಿ ಪ್ರೇಮ!' ಎನ್ನುವನೇ.
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

# ನಮನ

ನಮೋ ಎಂಬೆ ಕವಿಗುರುವೆ ತಣಿಸಿತೋ ಅಮರ-ದೂತ-ಮೇಘಾ
ನಿನ್ನ ಇನಿಯಳಂತೆಯೇ ನನ್ನನೂ ದಿವ್ಯ ಕಾವ್ಯದೋಘಾ॥
ಇಂದ್ರಮಾಯೆಯನು ಭಾವಛಾಯೆಯನು ನೂರು ಕಡೆಗೆ ಚೆಲ್ಲಿ
ಅಮೃತಗರೆವುದಿದು ರಸಿಕಹೃದಯದಲಿ ದಿಗ್‌ದಿಗಂತದಲ್ಲಿ ॥

ಕಾಮಸ್ತದಗ್ರೇ ಸಮವರ್ತತಾಧಿ
ಮನಸೋ ರೇತಃ ಪ್ರಥಮಂ ಯದಾಸೀತ್॥
ಸತೋ ಬಂಧುಮಸತಿ ನಿರವಿಂದನ್
ಹೃದಿ ಪ್ರತೀಷ್ಯಾ ಕವಯೋ ಮನೀಷಾ॥

ಋ. ೧೦. ೧೨೯. ೪.

ನಿವರ್ತಸ್ವ ಹೃದಯಂ ತಪ್ಯತೇ ಮೇ।

ಋ. ೧೦. ೯೫. ೧೭.

# ಪೀಠಿಕೆ

**ಅನಾದಿ ಕಾಮದ ಕ್ರಮ :**

ಬ್ರಹ್ಮ-ಹೃದಯದಲಿ ಜನಿಸಿದಿಚ್ಛೆ ಕೊನೆಗಾಣಲೆಂದು ಬಾಳಿ
ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ॥
ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ
ಬಂತು ಪೂರ್ವದಲಿ, ದೇವ-ಕಾಮವೇ ಕಾಮ-ದೇವನಾಗಿ॥

ರತಿಯನಗಲಿಸಿದರಯ್ಯೋ ಪಾಪಗಳು ಕಾಮನನ್ನು ರಮಿಸಿ
ಶಿವನ ನೇತ್ರಕಾಹುತಿಯ ಕೊಟ್ಟರೋ, ಒಳಿತು, ತಪ್ಪ ಕ್ಷಮಿಸಿ॥
ರತಿಯ ವಿರಹದಲಿ ಬೆಂದ ಕಾಮ; ಎಚ್ಚೆತ್ತ ಭೂತಪತಿಯು
ಸತಿಯ ಸರ್ವ-ಮಾಂಗಲ್ಯಕಾಗಿ ಅಳಬೇಕೊ, ಪಾಪ! ರತಿಯು॥

ವಿರಹಪೂತರತಿ ಜೀವಮೂಲಸತಿ ಚಿತ್ತರಂಗದಲ್ಲಿ
ಸಾಂಗವಾಗಿ ಮೈಗೂಡಿಕೊಂಡಳೊ ಆ ಅನಂಗನಲ್ಲಿ॥
ಋತುವಿನೊಂದು ಪ್ರೇರಣೆಗೆ ಕೂಡುವದು ಬಲ್ಲದೇನು ಪಶುವು
ಪ್ರೌಢ ರತಿಯು ಕೈಕೂಸು ಆಗಿ ಬೆಳೆದಿಹುದು ಕಾಮ-ಶಿಶುವು॥

ತನ್ನ ಕಿಚ್ಚಿನೊಳಿ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು
ಮೂಲ ಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು॥
ಜನ್ಮಜಾತ ಕುತುಕಕ್ಕೆ ರಮ್ಯ ತವನಿಧಿಯ ಹಾಗೆ ಭವ್ಯ
ಸತ್ಯಕಾಗಿ ನೀರಡಿಸಿ ನಿಂತ ಸೌಂದರ್ಯದಂತೆ ದಿವ್ಯ॥

ಅನ್ನ ಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು
ಮನದ ಕಾವಿನಲಿ ಕಾಮವಾಗಿ ಮನದಾಚೆಗೇನೊ ಅರಿತು ॥
ಚಿತ್ತದಲ್ಲಿ ನಿಷ್ಕಾಮರತಿಯು ರಸಪಾಕವಾಗಿ ನಿಂತು
ಧಾರೆಗೆಡದ ಭಗವಂತನಲ್ಲಿ ಚಿರಭಕ್ತಿಯಾಗಿ ಬಂತು॥

ಬ್ರಹ್ಮದಿಂದ ಅಗಲಿಸಿತು ಮಾಯೆ ಆ ಬ್ರಹ್ಮಕದುವೆ ಸೇತು
ಬೀಜವೊಡೆಯೆ, ಆ ಬೀಜಪಡೆಯೆ ಬರುವಂತೆ ಬೀಜ ಹೂತು॥
ಇಹುದುವೆಂದರದು ಅಹುದು ಇದಿರು; ಇದು ಅಲ್ಲವೆಂದರಿಲ್ಲ
ದೇವಮಾಯೆ ಆದರಾಟ ಮಾಟಗಳ ಬಲ್ಲನೊಬ್ಬ ಬಲ್ಲ॥

**ಜೀವಲೋಕದಲ್ಲಿ ಕಾಮ :**

ಭಿನ್ನ ದೇಹದಲಿ ಏಕಜೀವ ಕಾಣುವರು ಕರಗಿ ಮಾಗಿ
ಯಾರೊ ಮೋಹದಲಿ, ಯಾರೊ ಊಹೆಯಲಿ, ಯಾರೊ ಯೋಗಿಯಾಗಿ॥
ಸವಿಯನುಣ್ಣುವರು ಬಾಳಸೆಲೆಯ ಬಗೆಬಗೆಯ ಜಾವದಲ್ಲಿ
ಕಾಮಿ ನೋವಿನಲಿ, ಕವಿಯು ಭಾವದಲಿ, ಭಕ್ತ ಜೀವನದಲ್ಲಿ॥

ಕಾಮತೃಪ್ತಿಯಲಿ ಸ್ನೇಹಸುಪ್ತಿಯಲಿ ಒಬ್ಬ ಮೈಯನುಣಿಸೆ
ಭಾವದೀಪ್ತಿಯಲಿ, ಛಂದವಾಯುಯಲಿ ಒಬ್ಬ ಮಾತ ಕುಣಿಸೆ॥
ತನ್ನ ಜೀವ ತಾದಾತ್ಮ್ಯ ಹೊಂದದೇ ತಣಿಸಲಾರನೊಬ್ಬ
ಯಾರಿಗೇತರಲಿ ಜೀವ ಆದುವ ಸವಿ; ಅವರಿದದುವ ಹಬ್ಬ ॥

ಕಾಮಿ ಒಗ್ಗುವನು ದೇಹಿ ಎಂದು ಮೋಹದಲೆ ಕಾಲಿಗಡಿಸಿ
ಕವಿಯು ಒಗ್ಗುವನು ತನ್ನಸಂಗಭಾವಕ್ಕೆ ಮಾತು ತೊಡಿಸಿ ॥
ಭಕ್ತ ಹಿಗ್ಗುವನು ತನ್ನ ಜೀವ ಹಸಮಾಡಿ ದೇವನಾಗಿ
ಒಬ್ಬನೊಲಿಸುತಿಹ ಒಂದೆ ನೂಲಿನಲಿ ಎಲ್ಲ ಕಾಪನಾಗಿ ॥

**ಭೂಮಿಯ ಕಾಮ :**

ಮಣ್ಣು-ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹಬವಣೆಯಲಿ ತಿರುಗೆ ತಿರುಗುವಳು ಹೊತ್ತುಸುತ್ತಿನಿಂದ ॥
ಕಣ್ಣ ನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ ॥

**ಯಕ್ಷ–ಯಕ್ಷಿ :**

ಮೂರು ಮೈಯ್ಯ ಮುಪ್ಪುರಿಯ ಒಲವು ಕಿಚ್ಚಾಗಿ ಕುಲುಮೆಯಂತೆ
ಕಾಮ ಕಾದು ಉಕ್ಕಿತ್ತು ಪ್ರೇಮ ತಂತಸದ ನಲುಮೆಯಂತೆ ॥
ಆಕೆಗಾತ ಮೈ ಉಸಿರು, ಉಸಿರ ಮೈಯಾಗೆ ಆತಗಾಕೆ
ಕನಸುಮನಸಿನಲಿ ಕಾಂತರಾಗೆ ಏಕಾಂತ ಬೇರೆ ಬೇಕೆ ॥

ಮೈಯ ಮಲೆಯ ತಲೆಯಲ್ಲಿ ಎಲ್ಲಿ ಆಸರಂತ ದೇವಲೀಲೆ
ಚೈತಲಂತೆ ಮಿಂಚಾಡೆ ನಡುವೆ, ಹೇಳಲಾಗೆ ಮೇಘಮಾಲೆ ॥
ವಿಂಧ್ಯಶಿಖರದಲಿ ಯಕ್ಷಚಿತ್ತ ಅಲಕೆಯನು ಚಿತ್ರಿಸಿಹುದು
ದೇವಜಾತಿ ಕೆಳಗಿಳಿದರೇನು ಅದು ಬಾನ ಹತ್ತಿರಿಹುದು ॥

ಈ ಯಕ್ಷನಕ್ಷಿಗಳು ಪಕ್ಷಿಯಂತೆ ಹಾರಿದವು ಗಾಳಿಯಲ್ಲಿ
ಸಿಗಲಿಲ್ಲ ತಾವು ಜಗದಗಲ ಬೀಸಿದಾ ನಯನಜಾಲದಲ್ಲಿ ॥
ಶೃಂಗಾರ ತೀರ್ಥದಲಿ ಮಿಂದ ಚಿತ್ತ ವೈದರ್ಭಿ ರೀತಿಯಾಗಿ
ಅಂತೆಯೇ ಬಂದು ಗಾಂಧರ್ವ ಪ್ರೀತಿ ಗಾಂಧರ್ವ ಗೀತಿಯಾಗಿ ॥

ಜೀವವೇನು ಭವಚಕ್ರ ತಿರುಗಿ ಮರೆತೀತು ಆತ್ಮತತ್ತ್ವ?
ಮರ್ತ್ಯಕಿಳಿದರೂ ಯಕ್ಷ ಮುಳುಗುವನೇ? ಒಳಗೆ ದಿವ್ಯಸತ್ತ್ವ ॥
ಅಲಕೆಯಲ್ಲಿ ಕೈಲಾಸದೆಡೆಗೆ ತಾ ಮಿಡಿಸಿ ಸಖಿಸ ಜಂತೆ
ಸಾಕ್ಷಿಯಾಗಿ ಆ ಯಕ್ಷಿ ತಪಿಸುತಿರೆ ಅಂತರಾತ್ಮನಂತೆ ॥

**ಯಕ್ಷನ ಮೇಘ :**

ಮೈಯ್ಯ ಉರಿಗೆ ಬಗೆ ಉಗಿಯು ಹೊತ್ತಿ ನಿಟ್ಟುಸಿರಿನೊಡನೆ ಏರಿ
ಕಣ್ಣು-ಮಂಜು ಕಂಬನಿಯು ತುಂಬಿ ಮುನ್ನೆನಹು ಮಿಂಚು ಸೇರಿ॥
ಗುಡುಗೆ ಗುಡುಗುತಿರೆ ವೈರಿ–ವಿಧಿಯ ಕಾಟಕ್ಕೆ ಎದೆಯು ತಾನು
ವಿರಹಿ ಹೃದಯದುದ್ಗಾರಸಾರವೇ ಮೇಘವಲ್ಲದೇನು॥

**ಕವಿಯ ಮೇಘ :**

ಮಾತು ಜ್ಯೋತಿ, ಆ ಹರಳು–ಧೂಮ, ರಸ ಸಲಿಲ, ಭಾವ ಗಾಳಿ
ಕವಿಯೊಳಾಗಿ ಕಟ್ಟಿತ್ತು ಕಾವ್ಯ ನವಮೇಘರೂಪತಾಳಿ॥
ಸ್ಥಾಯಿ ಅಲ್ಲಿ ಸಂಚಾರದಲ್ಲಿ ರಸಪಾಕವಾಗಿ ಬಂತು
ಮರೆವ ಹಾಗೆ ಆ ಸುಟ್ಟ ಕಾಮ ಪ್ರದ್ಯುಮ್ನನಾಗಿ ನಿಂತು॥

**ಕವಿ ಕಾಳಿದಾಸ :**

ತಾನು ಉಂಡ ಎದೆಯೊಲುಮೆ ತಾನು ಸೊಗವಟ್ಟು ಪಡೆದ ಹೆಣ್ಣು
ತಾನು ಕಂಡ ಋತುಮಾನ ತನ್ನ ಬಾಗಿಸಿದ ಚೆಲುವು ಕಣ್ಣು ॥
ಬಂದ ಬಂದ ನದಿ ಬೆಟ್ಟ ಪಟ್ಟಣದ ರಮ್ಯ ಛಾಯೆಯಿಂದ
ಮೋಡದೊಂದು ನೆವ ಮಾಡಿ ಹಾಡಿದನು ಯಕ್ಷ-ಮಾಯೆಯಿಂದ॥

ಇರಲಿ ಬೆಟ್ಟ ನದಿ, ಇರಲಿ ಶಿವನ ಸತಿ, ಇರಲಿ ಕಾಡು ನಾಡು
ಇರಲಿ ಕಾಮ-ರತಿ, ಅಜನು-ಇಂದುಮತಿ, ಬರಲಿ ಸಾವು ಕೇಡು॥
ಯಕ್ಷ-ಯಕ್ಷಿ ಇರಲಕ್ಷಿ-ಪಕ್ಷಿ ಕಣ್ಗಂಡ ಪಾತ್ರದಿಂದ
ಪ್ರೇಮದಾಟವನು ಕವಿಯು ಆಡಿಸಿದ ಕಾಮಸೂತ್ರದಿಂದ ॥

ಜಗವೆ ದೇವತನುವೆಂದು ಮಣಿದ ನೀನೇನು ನಿನ್ನ ಮತಿಯು
ರತಿಯು ನಿನ್ನ ರಸದಲ್ಲಿ ನಾನು ಆಗಿಹಳು ಮುಕ್ತಿ ಸತಿಯು ॥
ಭಕ್ತ ನೀನು ಅನುರಕ್ತ ದಿವ್ಯದಲಿ ಉಳಿದ ಕಣ್ಣು ಭವಿಯು
ಎಲ್ಲ ಕಡೆಗು ಚೈತನ್ಯಲೀಲೆ ಕಂಡವನೆ ನೀನೆ ಕವಿಯು॥

ಬೆಟ್ಟಕೊಲಿಯೆ ಮನ ಬೆಟ್ಟದಂತೆ ಬಗೆಹರುಹು ಎತ್ತರಹುದು
ಹೊಳೆಗೆ ಒಲಿಯೆ ಮನ ಹೊಳೆಯ ಹಾಗೆ ಬಗೆ ಭಾವ ಹೊಳಿಸುತಿಹುದು
ಬೆಟ್ಟಹೊಳೆಯ ಬಿಟ್ಟಿರದು ನಿನ್ನ ಬಗೆ ಎಂಥ ಭವ್ಯ ರುಚಿಯು
ಕಡಲಿನಂತೆ ಗಂಭೀರಗುಂಭ, ಸೌಂದರ್ಯದಂತೆ ಶುಚಿಯು॥

**ಮಂದಾಕ್ರಾಂತ :**

ಆ ವಿರಹ ಅಲಸ ಗುರುಪದರಗಳಿಂದ ಲೀಲ್ಯಾಲೋಲವಾಗಿ
ಆಕ್ರಾಂತವಾಗಿ ಉತ್ಕಂಠೆಯಿಂದ ಲಘುಪದಗಳಿಂದ ಸಾಗಿ॥
ಮುಗಿತಾಯುವಲ್ಲಿ ಗುರುಲಘುಗಳಿಂದ ದಿಂಕಿಡುವ ಹಾಗೆ ನೂಂಕಿ
ಮಂದಾಕ್ರಾಂತದಲ್ಲಿ ವಿರಹಿ ಹೃದಯುವನು ಸುಡುವದಣ್ಣ ಬೆಂಕಿ॥

ಜಲದ ಭಾರದಲಿ ಜಲದ ಬಾಸಿನಲಿ ಮಂದಮಂದವಾಗಿ
ಗಾಳಿಯಿಂದ ಆಕ್ರಾಂತವಾಗಿ ಗುಡುಗುಡುಗಿ ದೂಡಿ ನೂಗಿ॥
ನದಿಗಾಗಿ ನಡೆದು ಬೆಟ್ಟಕ್ಕೆ ತಡೆದು ನಗರಿಯಲಿ ಪೋದವಡೆದು
ಸಾಗುತಿಹುದು ಮಂದಾಕ್ರಾಂತ-ರಸ ವಿರಹಿ ಛಂದ ಹಿಡಿದು॥

**ಬೇರೆ ದೂತಕಾವ್ಯಗಳು :**

ನಿನ್ನ ದೂತ-ಪಾದಗಳ ಮುಟ್ಟಿ ಕಟ್ಟಿದರು ಕಬ್ಬವೊಂದು
ನಿನ್ನ ಭಾವ ಬೆನ್ನಟ್ಟಿ ಕಂಡರೋ ಯಾರೊ ಹಬ್ಬವೆಂದು ॥
ನಿನ್ನ ದೂತಗರಿ ಗರುಡನಿದಿರು ಕಳುಹುವರೆ ಗುಬ್ಬಿಯೊಂದು
ಅಂಚೆ ಕೊಂಚೆ ಶುಕ ಕಾಕ ಕೋಕ ಬಕ ಕೇಕಿ ಭೇಕಿ ಎಂದು॥

**ಭಾಷಾಂತರವಲ್ಲ; ಭಾವಗ್ರಹಣ :**

ಕವಿಯ ಕಮಲಕೃತಿಯಲ್ಲಿ ಉಂಡೆ ನಾನೊಬ್ಬ ಭಾವಭೃಂಗ
ಪಕಳೆಮಾತು ಉದಿರಾಡಬಹುದು, ತುಂಬೀತು ಸ್ವಾಂತರಂಗ॥
ತೋಳುಗೀಳು ಸಡಲೀತು ಪ್ರಿಯರ ಸುಸ್ನಿಗ್ಧ ಬಂಧದಲ್ಲು
ಪ್ರಾಣತುಂಬುವಾ ಅಧರಪಾನ ಇಳಿದೀತೆ ಉದರದಲ್ಲು? ॥

# ಗಂಡುಸು-ಹೆಂಗುಸಿಗೆ

(೧)

ತಾಯು ಕನಿಮನೆಯೋ ನೀ ಅಕ್ಕ ಅಕ್ಕರತೆಯೋ
ಬಾಯೆನ್ನ ತಂಗಿ ಬಾ ಮುದ್ದು ಬಂಗಾರವೇ
ನೀಯೆನ್ನ ಹೆಂಡತಿಯೊ ಪ್ರೈಗೊಂಡ ನನ್ನಿಯೋ
ಮಗಳೊ ನನ್ನೆದೆಯು ಮುಗುಳೊ?
ಈಯೆನ್ನ ಇರವಿಂಗೆ ಬೇವಸದ ಬಾಳಿಕೆಗೆ
ಈಯುತ್ತ ಕೈಮೈಗಳಂ ಜೀವಭಾವದಿಂ
ಸ್ತ್ರೀಯು ಕಾಪಾಡಿದೌ ಪಾಡಾಗಿ ಮೂಢನನು
ತಕ್ಕೈಸಿ ನೂರು ತೆರದಿ.

(೨)

ಮಂಗಮನಸಿನ ಕೂಡ ಜಂಗಮಜಗತ್ತಿನೊಳ
ದಂಗುಬಡಿದವನಾಗೆ ಸ್ಫೂರ್ತಿಯಾಗುತೆ ಬಂದು
ಹೆಂಗರುಳನಂದದಿಂ ಗದ್ದವಂ ಪಿಡಿದು ಮು-
ದ್ದಾಡಿ ಮುಂಗುರುಳ ತೀಡಿ
ತಿಂಗಳಿನ ಬೆಳಕ ಪೊಂಗೆಳತಿ ಜೊತೆಯಾದೆ ನೀ
ಕಂಗಳಿಗೆ ಕತ್ತಲೆಯೊಳಿದ್ದವಗೆ ಬೆಂದವಗೆ
ಮಂಗಲೆಯು ಸಂತೈಸಿದೌ ಕಾಂತೆ ಶಾಂತಿಯೋ
ಪೊದ್ದಿಕೆಯ ನಿದ್ದೆಯಾಗಿ.

(೩)

ತರುಣಿ ಸೈರಣೆ ನಚ್ಚು ಮೆಚ್ಚು ಮಮತೆಯು ನೇಹ
ಕರುಣೆ ಶ್ರುತಿಸ್ಮೃತಿ ಮತಿಯು ಕೀರ್ತಿ-ಧೀ-ಶ್ರೀರೂಪ
ತೆರೆಯಾಗಿ ತೂಗಿದೌ ಅಂತರಂಗವಿದೀಗ-
ಲಾಡಿತು ತರಂಗವುಯ್ಯಾ

ಹರೆಯುವಳಿಯದ ಜರೆಯೆ ಸಾವೆಂದು ತೋರ್ಪ ಪರಿ-
ಸರೆಯಿಂದ ಸತತ ನೀ ಬಿಡಿಸುವೆ ಜಗಜ್ಜನನಿ
ಶರಣು ಬಂದೆನು ಶರಣ್ಯಳೆ ಹೆಣ್ಣೆ ಸೃಷ್ಟಿಯೋ
ಸಲಹುವ ಧರಿತ್ರಿಯಾಗಿ.

(೪)

ಕನ್ನಡಿಯ ಒಳಗೆ ಪೆರಗನ್ನಡಿಯ ಪಡಿನೆಳಲು
ಕಣ್ಣೆದಿರುಗಣ್ಣಿನೊಳಗೊಬ್ಬರೊಬ್ಬರ ಗೊಂಬೆ
ಚಿನ್ನನಂತದ ಪಾಂಗು ನಮ್ಮಿಬ್ಬರೊಳಗೆ ಪ–
ಬ್ಬಿಹುದು ಅರಿದರಿದು ಹೆಣ್ಣೆ !
ನನ್ನ ನಿನ್ನಯ ಮನದ ಜೊನ್ನ ಮಗ್ಗದ ಮೇಲೆ
ನಿನ್ನ ಮತ್ತೆನ್ನೆದೆಯ ಕಸೆಗೆ ಕಸೆಯನುಗೊಳಿಸಿ
ನನ್ನನೇಕಾರಿತಿಯು ಮುಗಿಯದಿಹ ಬಟ್ಟೆಯ-
ನನ್ನವರತ ನೇಯುತಿಹಳು.

# ಚಿಗರಿಗಂಗಳ ಚೆಲುವಿ

ಚಿಗರಿಗಂಗಳ ಚೆಲುವಿ ಬೆದ್ರಾರಿ ನಿಂತಾಳ ನೋಡೋ
ಬೆದ್ರಾರಿ ನಿಂತಾಳ ॥ಪಲ್ಲ॥

ಹೊಳಿಹಳ್ಳ ತೊರೆದಾವೋ
ಗೆಣೆಪಕ್ಕಿ ಬೆರೆದಾವೋ
ಆಗದವರ ಹೊಟ್ಟಿ ಉರದಾವೋ
ಗೆಣೆಯ ಉರದಾವ
ಅಂಥವರ ದಿಟ್ಟಿ ಮೂನಿ ಮುರದಾವ;
ಅದನ ತಾ ಕಂಡು ಕೊರಗ್ಯಾಳೊ
ಮರುಗ್ಯಾಳೊ
ಸೊರಗ್ಯಾಳೋ
ಹೂ ಕಾಯಿ ಹಣ್ಣು ತುಂಬಿದ ಬನದಾಗ॥ ಚಿಗರಿಗಂಗಳ....

ಬ್ಯಾಟಿ ನಾಯೊವರ್‍ಯಾವೋ
ಹಸುಜೀವ ಬೆದರ್‍ಯಾವೋ
ಗಳಗಳನೆ ಗಿಡದೇಲಿ ಉದರ್‍ಯಾವೋ
ಗೆಣೆಯಾ ಉದರ್‍ಯಾವ
ದಿನ್ನಿ ಮಡ್ಡಿ ಗುಡ್ಡ ಅದರ್‍ಯಾವ;
ಅದನ ತಾ ಕಂಡು ನೊಂದ್ಯಾಳೊ
ಬೆಂದ್ಯಾಳೊ
ಅಂದ್ಯಾಳೊ
'ಇದು ಎಂಥಾ ಜೀವದ ಬ್ಯಾಟಿ ಹಾಡೇ ಹಗಲ್ಯ'॥ ಚಿಗರಿಗಂಗಳ....

ಆಳುಗಳ ಹೋರಾಟ
ಆಳುವವರಿಗೆ ಆಟ
ಗಾಳಕ್ಕ ಸಿಕ್ಕ ಮೀನದ ಗೋಳಾಟೋ
ಗೆಣೆಯಾ ಗೋಳಾಟಾ

ಗೆದ್ದವರ ಇದ್ದವರ ಹಾರಾಟೋ;
ಅರೆಸತ್ತ ಜೀವಾ ಕೊಳೆತಾವೊ
ಹುಳತ್ಯಾವೊ
ಅಳತ್ಯಾವೋ
ಹಸುಗೂಸು ತಿರುಗಿ ಹೊಟ್ಟ್ಯಾಗ ಹುಗಿದ್ಹ್ಯಾಂಗ॥ ಚಿಗರಿಗಂಗಳ....

ತನ್ನ ತಾ ಸುತ್ತ್ಯಾಳೊ
ಹೊತ್ತಿನ ಬೆನ್ಹತ್ತ್ಯಾಳೊ
ತಿಂಗಳಿನ ಬಗಲಾಗೆತ್ತ್ಯಾಳೊ
ಗೆಣೆಯಾ ಎತ್ತ್ಯಾಳೋ
ಉಕ್ಕುಕ್ಕುವ ದುಃಖ ಒಳಗೊತ್ತ್ಯಾಳೊ ;
ನಿಂತ ನೆಲವೆಂದು ಕಡಿಲ್ಯಾಕೊ
ಹಡಿಲ್ಯಾಕೊ
ಒಡಿಲ್ಯಾಕೊ
ಒಡವ್ಯಲ್ಲ್ಲೋ ಮಗನೆ ಉಸಿರಿದ್ದೊಡಲಂತ್ಯಾಳೋ॥ ಚಿಗರಿಗಂಗಳ....

# ಗೃಹಿಣಿ

ಏಳು ಮೆಟ್ಟಿನ ಪಾಲಿಯ ಬೀರ ಬೇಂಟೆಯ ಬಿಡಿಸಿ
ಮಗುವ ಮುದ್ದಾಡುವ್ವೊಲು ಮಾಡಿದಾಕೆ.
ಗುರಿಯಿಟ್ಟು ಕಣ್ಣುಗಳ, ಕಿವಿಯೂದಿ, ಹೊರಳಿಸುತ
ತಾನೆ ತನ್ನಷ್ಟಕ್ಕೆ ಹಾಡಿದಾಕೆ.

ತಳಿರುಡುಗೆಯನುಟ್ಟು ಗರಿತೊಡುವುಗಳ ತೊಟ್ಟು
ಅಡವಿಯಲಿ ಹೂದೋಟ ಹೂಡಿದಾಕೆ.
ಗಿಡಕೆ ಗುಡಿಯನು ಕಟ್ಟಿ, ಬೇರೊಂದು ಲೋಕವನು
ಮೂಕ ಮಾತುಗಳಿಂದ ಬೇಡಿದಾಕೆ.

ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ.
ಮಂಗಲವೆ ಬಾರೆಂದು ಕರೆಯುವಾಕೆ.
ಬಾಳಸುಳಿಯಲಿ ಬೆಳೆಯ ತೋರುವಾಕೆ.
ದಿನದಿನವು ನವ ಜಯವ ಕೋರುವಾಕೆ.

# ಮುತ್ತೈದೆ

'ಗೆದ್ದೆ' ಎಂದಳು ಒಮ್ಮೆ ಸಾಯಲಿರುವಾಗ ಮುತ್ತೈದೆ–
'ಇದ್ದುದೆಲ್ಲವು ಶುದ್ಧ ಒಡ್ಡಾಟ ; ಹೊರಬಿದ್ದುದೇ ಗೆಲವು.
ಇದೆ ಬಲವು ಮುತ್ತೈದೆತನಕೆ', ಮುತ್ತಯ್ಯ ಮುಳುಮುಳು ಅತ್ತ.

ಮುತ್ತೈದೆ ಕಣ್ಣು ಆಯಿತು ಒದ್ದೆ-ಅದುವು ಗಂಗಾಯಮುನೆ
ಖೇದಜಲ ಮೋದಜಲ; ಸಂಸಾರ ಸಾರಸ್ವತದ ಕೂಡಲವು.
'ತಾಳಿ-ಕುಂಕುಮ-ಓಲೆ, ಕಂಕಣದ ರುತಿ ಮೇಲೆ.
ಅಪ್ಪ, ನೀನಳಬೇಡ, ಹಿಂದಾಗಿ ಹುಟ್ಟಿ ನೀ ನನ್ನ
ಮೊದಲಿಗೆ ಎದ್ದೆ. ಗೌರಿ ನೀ ಮುಂದಾಗಿ ಹೋಗಿ
ಬಾಗಿಲ ತೆರೆಸು ವೈಕುಂಠದಲಿ, ಥೃಷ್ಟರನು ಒಳಗೆ
ಬಿಡುವರೆ ಅಲ್ಲಿರುವ ದಿಂಡಿಗರು ದಾಂಡಿಗರು,
ನಾನೂ ಬಂದೆ, ನೀ ಮುಂದೆ ನಾ ಹಿಂದೆ'.

ಕೊನೆನೋಟ ತೆರೆದು ನೋಡಿದಳು ಜೊತೆಯುವನ;
ಹೊಟ್ಟೆಮಕ್ಕಳನೊಮ್ಮೆ ನೋಡಿದಳು ಕಣ್ದೆರುಹಿ.
ಕೈಮುಗಿದಂತೆ ಮುಗಿದುಕೊಂಡವು ಕಣ್ಣು ನಾಸಾಗ್ರ–
ದೃಷ್ಟಿಯಲಿ ಮೂಗು ಮೂಗುತಿ ಕಂಡು, ಒಳಹದುಳ-
ದಲಿ ಕುಲುಕುಲು ನಗುವ ಜುಮುಜುಮು
ನಸುಕಿನೊಲು ನಗೆಮುಗುಳನರಸಿದಳಾ ಧನ್ಯೆ–
ನಿರ್ಮಾಳ ಕನ್ಯೆ!

ಒಳಹೊರಗು ಬೆಳಕು ತುಂಬಿತ್ತು. ಬೆಳಗುಗನಸಿನ
ಹೃದ್ಯಸಂವೇದನೆಯ ಸುತ್ತು. ರಸಬಿಂದು ಒಂದರೊಳಗೊಂದು
ಕೈಧಾರೆ, ಕಂಕಣಸಾಲು, ನಾ ಮೇಲು–ನೀ ಮೇಲು!

# ಕಥೆಯಾದಳು ಹುಡುಗಿ

ಹಸಿಯಿದ್ದಳು ಬಿಸಿಯಾದಳು
ಸಸಿಯಿದ್ದಾ ಹುಡುಗಿ
ಹುಸಿಯರಿಯದ ಹುಡುಗಿ
ಕಣ್ಣೆದಿರಲ್ಲೇ ಬೆಳೆದಳು
ಹೊಸ ದೇಸಿಯ ಬೆಡಗಿ.

ಸೊಸೆಯಿದ್ದಳು ಚಿಗುರಿಟ್ಟಳು
ಉಗುರ್ಗೆಂಪಿನ ಹುಡುಗಿ
ಉಸಿರ್ಗೆಂಪಿನ ಹುಡುಗಿ
ಆಡುತ ನೋಡುತ ಬಿಟ್ಟಳು
ಊರೆಲ್ಲವನುಡುಗಿ.

ಚಿಗುರಿದ್ದಳು ಚಿಗರೆಯ ಮರಿ
ಹೂಬಿಟ್ಟಳು ಹುಡುಗಿ
ಮೊಗ್ಗಿದ್ದಾ ಹುಡುಗಿ
ಕಣ್ಕುಣಿತಕೆ ನಗೆ ಭಣಿತಕೆ
ಮನೆ ಹೋಯಿತು ನಡುಗಿ

ಹಾ ಹಾ ಎನ್ನುತ ಬೆಳೆದಳು
ಕೂಸೆನಿಸಿದ ಹುಡುಗಿ
ವಧುವಾದಳು ಹುಡುಗಿ
ಒಗರಳಿದಿತು ಹುಳಿಯಿಳಿದಿತು
ಬೆಡಗುಳಿದಿತು ಅಡಗಿ

ಆ ಪಾಕವೊ ಆ ಪಾಡೊ
ತಾಯಾದಳು ಹುಡುಗಿ
ಹಾಯಾದಳು ಹುಡುಗಿ
ಪಡೆದಷ್ಟೂ ಹಿಗ್ಗವಳಿಗೆ
[illegible]

ಪಾಡಾದಳು ಹಣ್ಣಾದಳು
ಮಣ್ಣಾದಳು ಹುಡುಗಿ
ನೆನಪಾದಳು ಹುಡುಗಿ
ವ್ಯಥೆಯಾದಳು ಕಥೆಯಾದಳು
ಎದೆಯಲ್ಲಿಯೆ ಮಡಗಿ!

# –ಗೆ

ಆಕೃತಿಯನಡಗಿಸಿಹ ಆಕಾರವೇ! ಏಕೆ ಮಿಸುಗುಡದ-
ಲಿಂತು ನಿಂತೆ
ಪ್ರಾಕೃತಗೆ ತಿಳಿಯದೀ ಮಾತು! ನಾಗರ ರಮಣಿ ಕಣ್ಸನ್ನೆ
ಗೈಯುವಂತೆ

ದೂಡುವಿಯೊ? ಹೊರಟಿಪೆನೊ ಗುಡಿಯಿದ್ದಯೆಡೆಗೆಂದು
ಮೆಟ್ಟಿಲುಗಳನ್ನು ಏರಿ?
ಮೂಡಿತ್ತು ಮನದಲ್ಲಿ ಕಾಮಕಲುಷಿತಪ್ರೇಮ
ಹೀಗೇಕೊ ತಿಳಿಯು, ನಾರೀ?

ಒಲಿಯದೇ ನಲ್ಲೆ! ನೀನಿಂತು ಒಲೆದಾಡುವಿಯೊ,
ಅನ್ನುವಿಯೊ 'ಒಲ್ಲೆ, ಒಲ್ಲೆ'
ಬಲದಿಂದ ಬಾಯ್ಬದಿಗೆ ಬಂದದ್ದು ಸಲ್ಲದಿದು-ಬಲ್ಲೆನೇ
ಬಲ್ಲೆ ಬಲ್ಲೆ.

ಮುದ್ದುಂಡ ದುಂಡುಮೊಗ-ಮುದ್ದು ಮುದ್ದಿನ ಹೊಂಡ
ಮುದ್ದನ್ನು ಬೀರ್ವುದಲ್ಲೇ!
ಮುದ್ದಿನಿಂ ಮುಂದುವರಿದಿಂದು ಮುದ್ದಿಡ ಬಂದೆ ಮುದ್ದನ್ನ
ದೇಕೆಯೊಲ್ಲೆ?

ಕಾಮುಕನು ನಾನೆಂದು-ಪ್ರೇಮದೇವತೆ ನೀನು–
ಬೆಂಬದಿಗೆ ನಿಂತೆ–ಬಾಗಿ
ರಾಮಣೀಯಕ ರೂಪ ಮುಂಬದಿಗೆ ಬಂದಿರಲು
ಉಳಿಯುವನೆ ಕಾಮಿಯಾಗಿ?

## ಓ ನಾರಾಯಣ !

ಬೆಂಕಿ ಬೇಕಾಗಿಹುದು, ಬೆಳಕು ಸಾಕಾಗಿಹುದು,
ಸುಡಲಿ ನವರತ್ನಗಳ ಪೆಂಪನೆಲ್ಲ.
ಅಂಕಿತದ ದಾಸಿಗೇಕೀ ಹೇಸಿ ಒಯ್ಯಾರ ?
ನೋಟ ಕೂಟವೆ ಹಬ್ಬ ನನ್ನ ನಲ್ಲ.

ಎಂದು ತೀರೀತು ಈ ತೃಷ್ಣೆ ಹಿಂಗುತ ಬರಲಿ
ಕೃಷ್ಣನಾಗೋ ನಲ್ಲ, ರಾಧೆಯಾಗಿ
ಬಂದು ಸೇರುವ ಕೇಳು, ಆರೆ ಸತ್ತ್ವನೊಳಹೊರಗೆ
ಪ್ರೇಮಕಾಮದ ಜೋಡುಬಾಧೆಯಾಗಿ.

ಒಲವಿಲ್ಲದೊಳವಿಲ್ಲ, ಒಳವಿಲ್ಲದೊಲವಿಲ್ಲ ?
ಒಳವು ಒಲವಿನ ಕೂಡ ಲಗ್ನವಾಗಿ
ಒಲವಿನಲಿ ಒರಲಿ ಒಳವರೆದು ಮುದ್ದಾಡುವೆನು,
ಆದಮ್ಮ ಈವ್ನರೊಲು ನಗ್ನನಾಗಿ.

ಪರಸುಗಲ್ಲಾಗಿ ಬಾ, ಜೀವಗಬ್ಬಿಣವನ್ನು
ಬಂಗಾರ ಮಾಡುವನು ಸೋಂಕಿ, ತಾಗಿ,
ಕರಗಿಸುತ ಎರಕವನು ಹೊಯ್ವ ನಿನ್ನಲಿ, ಚುಂಬಿ–
ಸೆನ್ನನ್ನು ಬಿಳಿಗಾವ ಬೆಂಕಿಯಾಗಿ.

ತಿಂಗಳಿನ ಒಡಲೊಗದು ಮುಗಿಲಿನಂಗಳ ಬಗೆದು
ನನ್ನಿನೇಸರ ಹರ್ಷ ಸಾಂದ್ರವಾಗಿ,
ಮಂಗಳನೆ ಮೂಡೆಲೋ ಕೋಟಿ ಭಾಸ್ಕರ ಪ್ರಖರ
ಅಮೃತನಿಸ್ಯಂದಿ ಮುಖಚಂದ್ರನಾಗಿ.

ಹಂಬಲಿಸಿ ಹಲುಬಿ ಗಳಹುವೆನು ಪಂಡಿತವಕ್ಕಿ
ಒಮ್ಮೆ ಮುದ್ದಿಡು ಮಾಡು ಮೂಕಳನ್ನು.
ಗೊಂಬೆಯಂದದಿ ನಿಲ್ಲಿಸುವ ಹಾಗೆ ಕೊಳಲೂದಿ
[illegible]

ಮುದ್ದಿನಲ್ಲಿದ್ದಂಥ ಮದ್ದುಂಟೆ? ಮೂಕರನು
ವಾಚಾಳಿಗೈಯಿಸುವ ಬೀಜಮಂತ್ರ,
ಗೆದ್ದು ಸೋಲುವ ಮತ್ತೆ ಸೋತು ಗೆಲ್ಲುವ ಗೋವ-
ಳನ ಕೊಳಲ ಪ್ರಾಣವಿಹ ಕಾಮತಂತ್ರ.

ವಿರಹತಾಪವ ನೀಡು, ನಿದ್ದೆಯೀಯದೆ ಕಾಡು,
ಕನಸು ಮನಸುಗಳಲ್ಲಿ ನೀನೆಯಾಡು,
ಅರುಹ ಮರೆವನು ಮಾಡು, ಅರಿದರಿದು ಒರೆನೋಡು,
ಪ್ರಾಣದಕ್ಷಿಣೆಯನ್ನು ಒಂದು ಬೇಡು.

ಶಾಂತಿ ಹಿಮದಿಂದೀಗ ಮರಗಟ್ಟಿತೆನ್ನ ಮೈ;
ಸುಡು ನನ್ನ ವಿಧವಿಧದ ತಾಪವಾಗಿ.
ಕಾಂತಿಗುಂದಲು ಹೊರಗೆ, ಕಾಂತಿ ಬಂದೀತೊಳಗೆ
ನಿನ್ನ ತಾಪವೆ ಕಾಮಚಾಪವಾಗಿ.

ಕಿಡಿಬೆಂಕಿ ಕೊಡು ನನಗೆ ಇಡಿ ನಿಧಿಯ ಹಾಕುವೆನು
ಅಡಿಪಿಡಿದು ಕೂಡುವೆನು ನನ್ನ ದೊರೆಯೇ.
ಮಿಡಿಯು ಪಣ್ಣಾದೀತು, ಬಿಡಿಯು ಇಡಿಯಾದೀತು,
ಒಡಲು ಮಡಿಯಾದೀತು ನಿನ್ನ ಬೆರೆಯೇ.

ಕುಡಿಬೆಂಕಿಯಾಗಿ ಬಾ, ರೆಕ್ಕೆಹುಳುವಾಗಿ ನಾ
ತೆಕ್ಕೆಹಾಯುವೆ ನಿನ್ನ, ನನ್ನ ಕೆಳೆಯೇ.
ಕುಡಿಸಿ ಹರಣಗಳನ್ನು, ಕುಡಿದು ಕಿರಣಗಳನ್ನು
ಒಡಗೂಡಿ ಮಡಿಯುವೆನು ನೀನು ಕಳೆಯೇ.

ಉಡಿಬೆಂಕಿಯಾಗು ನಿನ್ನುಡಿಯಲ್ಲಿ ಹಾರುವೆನು
ಒಡಲಲ್ಲಿ ಸೇರುವೆನು ನನ್ನ ತಾಯೇ.
ಪಡೆದಾಗ್ಗೆ ಪಡೆಯೆನ್ನ, ಬೇಡಾಗೆ ಬಿಡು ಎನ್ನ
[illegible] ನಾನು ನೀನು [illegible]

ಇಡಿ ಬೆಂಕಿಯಾಗಿ ಹೊತ್ತೊತ್ತಿ ಕಿಡಿಕಿಡಿಯಾಗು
ನಿನ್ನ ನನ್ನಿಯ ನೆನೆದು ಪ್ರಾಣಪತಿಯೇ,
ಮುಡಿ ನಿನ್ನ ಅಡಿಗಿಟ್ಟು ನಡುಬೆಂಕಿ ಸೇರುವೆನು
ಮಾಸತಿಯ ಹಾಗೆನ್ನ ದಿವ್ಯಚಿತೆಯೇ.

# –ಗೆ (೧)

ನಿನ್ನ ಬಿಟ್ಟನ್ಯರನು ಆಸೆಬುರುಕನ ಹಾಗೆ ನೋಡುತ್ತ ಕಾಲ ಕಳೆದೆ
ಗನ್ನಗತಕದಿ ಬೆಳೆದೆ ಕನ್ನ ಕಾಯಕವೆಳಸಿ ಉನ್ಮಾದಿರೂಪ ತಳೆದೆ.

'ಶುದ್ಧಿಯಿಲ್ಲದೆ ಸಿದ್ಧಿಯಿಲ್ಲದೆ'ಂಬುವ ಮಾತು ನಿಜವೊಂದು ದೃಷ್ಟಿಯಿಂದ
'ಸಿದ್ಧಿಯಿಲ್ಲದೆ ಶುದ್ಧಿಯಾಗದೌ' ನನ್ನೊಳಗೆ ವಿಪರೀತ ಸೃಷ್ಟಿಯಿಂದ.

ತುದಿಗಾಣೆ ವ್ಯೂಹದಲಿ; ಎಡವಿದಲ್ಲಿಯೆ ಎಡವಿ ಆ ಗಾಯ ಮಾಯದಂತೆ
ಜಿದಿಯಿಂದ ಕುದಿಯುತಿಹ ಮಂಕುಮರುಳನು ಹೊಸೆದ ಹೊಸ ಚಕ್ರನ್ಯಾಯ
ದಂತೆ

ನಾನು ಅರ್ಭಕಭಕ್ತ, ನೀನು ಗರ್ಭದಿ ಹೊತ್ತ ನನ್ನ ಕನಿಮನೆಯು ಅಲ್ಲೇ
ನೀನು ಕರುಣಿಸುವಂತೆ ಅಳುವದೊಂದೇ ಬಲ್ಲೆ, ಕೇಳಿಸದೆ ಕರುಳನಲ್ಲೇ?

ಚೆನ್ನಗೋಗಿಲೆಯು ಬರಿ ಪಂಚಮವನರಿವಂತೆ ನನ್ನ ನಲ್ಲಮ್ಮ ನೋಡೇ
ನಿನ್ನ ನಲ್ ನಂದನದಿ ನನ್ನಿಯೊಂದೇ ಉರಿವ ಹಸು ಹಕ್ಕಿಯಾಗಿ ಮಾಡೇ.

ಇಂಥ ಜನ್ಮಕೆ ಬಂದು ಸತ್ಯಪ್ರೀತಿಗಳೆರಡು ದೃಢಮೂಲವಾಗಿ ಬೆಳೆಯೆ
ಪಂಥ ಹತ್ತಿದ ಮೇಲೆ ಮತ್ತೆ ಕಳಿಸುವೆಯಂತೆ ಮನುದೇಹವನ್ನು ತಳೆಯೆ.

## -ಗೆ (೨)

ರಾಣಿವಾಸದೆ ನಿಂತ ಪ್ರೇಮಲೋಕದ ರಾಣಿ
ಇಂದ್ರಾಣಿ ಮಂತ್ರವಾಣಿ
ಕಾಣೆನಿನ್ನೂವರೆಗು ಕಾಮಿನಿಯರೆನಗೀಗ
ಕರೆಯುತಿಪರೆಲ್ಲ ಜಾಣೆ.

ಬೇಟ ಬೆಡಗುಗಳೆಂಬ ಆಟಮಾಟಗಳಿಂದ
ಜಗ್ಗುವರು ಪರಣಗಳನು
ಕೂಟ ತಿಳಿಯದೆ ಆಮಿಷಕ್ಕಾಗಿ ಪರಿತರುಪ
ಮಿಾನದೊಲು ಕರಣಗಳನು.

ಬಾಯ್ಬಿಟ್ಟು ಕಣ್ಬಿಟ್ಟು ಕೈನೀಡಿ ಕೈಮಾಡಿ
ಕರೆಯುವೆನು ಲಜ್ಜೆ ತೊರೆದು
'ತಾಯ್ಬಾರೆ-ಹಾಯ್ ಬಾರೆ' ಎಂದು ಕರೆಯುವ ಕೂಸಿ-
ನಂತೀಗ ಅತ್ತು ಕರೆದು.

## –ಗೆ (೩)

“ಎತ್ತ ನೋಡುವಿ ಮತ್ತ! ಎತ್ತ ಹಾರಿತು ಚಿತ್ತ!
ಅತ್ತೇಕೆ? ನೋಡು ಇತ್ತ.
ಭಿತ್ತಿಯೊಳಗಿನ ಬೊಂಬೆಯಂತಿಹೆ ಮುಂದೆ
ಸತಿಯಾಗಿ ನಸುನಗುತ್ತ.

ಮಳೆಯ ನೀರಸು ಬಿಟ್ಟ ಮರುಳ ಚಾತಕಯುಗಲ-
ದಂತೆ ಮದ್ದುಂಡೆ ಏನು?
ಕಳೆಯ ಬದಲಿಸುವಂಥ ಮಂಜ ಹಿಂಬಾಲಿಸಿಹೆ,
ನೀರದೆಯು ಮುಂದೆ ನಾನು.

ಮರ್ಮವರಿಯದಲೇಕೆ ಯಾತ್ರಿಕನಪೊಲು ಹೊರಟೆ,
ಮನೆಯೊಡೆಯನಾಗಲಮ್ಮ.
ಧರ್ಮಪತ್ನಿಯ ದೇಹ ಧರಿಸಿ ಬಂದಿಹೆ ನೋಡು
ಆಡು-ಮುದ್ದಾಡು ಒಮ್ಮೆ.”

* * *

“ಚೆಲ್ಲಿಯೊಂದದ ನಿನ್ನ ಚೆಲ್ಲೆಗಂಗಳ ಚೆಲುವ
ಚೆಲ್ಲಾಟಗಳಿಗೆ ಬಿಟ್ಟು
ಲಲ್ಲೆವಾತಿನ ಲಲನೆ! ನನ್ನ ಕಂಗಳನೊಮ್ಮೆ
ನನ್ನ ವಶದಲ್ಲಿ ಕೊಟ್ಟು.

ಸೂತ್ರಧರ ನಟಿಯಾಗು, ಚಿತ್ರ ಚಿತ್ರದ ಸೋಗು
ಬೇಡ ಆ ರಂಗಿನಲ್ಲಿ.
ಪಾತ್ರವಾಡುವೆ ಬಂದು, ನಾಟ್ಯವಾಡುವೆನಿಂದು
ನಿನ್ನಂತರಂಗದಲ್ಲಿ.

ಮನಸವ ಮುಡಿಯಲ್ಲಿ ಕಣ್ಣುಕಿಡಿಗಳನು ಅಡಿಯಲ್ಲಿ
ಇಟ್ಟು ಭಜಿಸುವೆನೆ ಚೆನ್ನ.
ತನುಧನದ ಮುಡುಪಿಡುವೆ ಮನದ ಪಾದರ ಬಿಡುವೆ
'ಈ ರೂಪ ನನ್ನದೆ'ನ್ನೆ.

ಭಾವನಕ್ಷತ್ರಗಳು ಮುತ್ತಿ ಮುದ್ದಿಡೆ ಬಾಳು
ನನ್ನ ಮನ ಚಂದ್ರನಾಗಿ
ಜೀವಜಲದಿಂದೆರೆದು ಪಟ್ಟಗಟ್ಟಲು ಆಳು
ಇಂದ್ರಿಯದ ಇಂದ್ರನಾಗಿ".

# -ಗೆ (೪)

ಹೇಳಿದರು ಗುಟ್ಟಾಗಿ ಕಂಡವರು ನಲ್ಲಮ್ಮ,
ನಿನ್ನ ಅದ್ಭುತರಮ್ಯ ಹಾವಗಳನು.
ಕೇಳಿದೆನು ಬೆರಗಾಗಿ, ಕತೆ ಕೇಳ್ವ ಹುಡಗನೊಲು
ಆತ್ಮೈಕ್ಯಗಮ್ಯ ಮಧುಭಾವಗಳನು.

ಪತಿಯು ಬಳಿ ಮಲಗಿರುವ ಸತಿಯು ಯೋಗಜಗಾಢ
ನಿಷ್ಪಾಪ ನಿದ್ರೆಯಂತೆ.
ಪ್ರತಿಶಾಂತಿ ಕೆಣ್ದಿರದ ಹಾಗೆ ಕಾಣುವದಮ್ಮ
ನಿನ್ನ ಮುಖಮುದ್ರೆ ಎಂತೆ.

ಆದರೂ ಕಿಡಿಗೇಡಿ ಕಂಗಳನು ತೆರೆದವಗೆ
ನಿಧಿಯ ಕಾಯುವ ಕಾಳಸರ್ಪದಂತೆ
ಕಾದ ಕಬ್ಬಿಣಗಂಬವಾಗಿ ತೋರ್ಪುದು ನಿನ್ನ
ಸೌಜನ್ಯದರ್ಪ ಎಂತೆ!

ಕ್ಷೀರಸಾಗರ ಎಂತೆ, ಪ್ರೇಮದಾಗರ ಎಂತೆ,
ಗಾಂಧರ್ವನಗರಿ ಎಂತೆ
ನೀರೆ ನೇತ್ರಗಳೆಂತೆ, ಮುಕ್ತಿಕ್ಷೇತ್ರಗಳೆಂತೆ,
ಗೂಢಗಾನದ ದಿವ್ಯ ಬೊಗರಿ ಎಂತೆ.

ಆದರೂ ಕಿಡಿಗೇಡಿ ಕಂಗಳನು ತೆರೆದವಗೆ
ಬ್ರಹ್ಮಾಸ್ತ್ರವೃಷ್ಟಿಯಂತೆ,
ಭೇದಿಸುತ ಛೇದಿಸುತ ಬರುವಂತೆ ತೋರುವದು
ನಿನ್ನ ಸಂಜೀವನದ ದೃಷ್ಟಿ ಎಂತೆ.

ಕಾಮನಲಿ ಕಾಮುಕನು, ರತಿಯಲ್ಲಿ ವಿರತಿಯನು
ಹುಟ್ಟಿಸುವ ಯುವತಿಯಂತೆ.
ಪ್ರೇಮದೇವತೆಗವಳ ನೆರಳೆ ಇದಿರಾದಂತೆ
ಮೋಹಿನಿಯ ಸವತಿಯಂತೆ.

* * *

ಇಂಥಿಂಥ ತರುಣಿಯರ ಕಂಡೆ ಕಾಣಿಸಿಕೊಟ್ಟೆ
ಕನಸಿನೊಳಕನಸಿನಲ್ಲಿ.
ನಿಂತು ಬಾಗಿಲಿನಲ್ಲಿ ಬರಿಸಿಕೊಡಲಿಲ್ಲ ನೀ
ಮನಸಿನೊಳಮನಸಿನಲ್ಲಿ.

ನಿನ್ನಡಿಯ ಕನ್ನಡಿಯ ಒಳಗೆ ಕಂಡಂತಾಯ್ತು.
ಕ್ಷಣಹೊತ್ತು ಮರೆತೆ ನಿನ್ನ.
ಚಿನ್ನಡಿಯ ಚೆಂಗಳೆಯ! ನಿನ್ನ ಮುಖವನೆ ನೋಡು-
ತಿರುವಂತೆ ಮಾಡು ಎನ್ನ.

* * *

ಹಾಳು ಮಾತುಗಳೇಕೆ? ಬೇರೆ ಲಕ್ಷಣ ಬೇಕೆ ?
ನೀನೊಕ್ಕಲಾಗಿ ನಿಂತೆ.
ಬೀಳುಬಿದ್ದಿಹ ಹೊಲವ ಸಾಗುಮಾಡೆನ್ನೊಡತಿ
ನನ್ನ ಒಕ್ಕಲಿಗನಂತೆ.

## -ಗೆ (೬)

ದಾರಿದಾರಿಗೆ ಬಾಯಿದೆರೆದು ಬಾರೇ ಎಂದೆ
ಜೀವನಾಯಕವಾದ ನೇತ್ರವಾಗಿ.
ಬಾರಿಬಾರಿಗೆ ಕರೆದು ಏಕೆ ನಗೆಯಾಟವಿದು,
ಬಂದೆ ಪಾತರದೋದು ಪಾತ್ರವಾಗಿ.

ಚಿಕ್ಕೆ ತೋರೇ ಎನಲು ಕಂಡೆ ಮಿಣಿಮಿಣಿ ಮಿಣುಕು-
ವಂಥ ಮಣ್ಣಿನದೊಂದು ಹಣತಿಯಾಗಿ.
ಅಕ್ಕ ಬಾರೇ ಗೆಳತಿ ಎನಲು ಮುರುಕುತ ಬಂದೆ,
ಬಣ್ಣಗಾರತಿ ಮಳ್ಳಿ ಗೆಣತಿಯಾಗಿ.

ಸೋಗಿನಲ್ಲಿಯು ಕೂಡ ಜಾಗಿಯಂದದಿ ಕಂಡೆ,
ಭೋಗಿ ಜೀವವೆ ನಿನ್ನ ಯೋಗದಿಂದ.
ಜಾಗುಮಾಡದೆ ನನ್ನ ಮಾಗುವಂದದಿ ಮಾಡು,
ನೀಗಲೀ ಹಸುವಿನ್ನು ಯಾಗದಿಂದ.

ಹೆಣ್ಣು ಇದ್ದಲ್ಲೆಲ್ಲ ಹೆಂಪು ಇರುವದು ಎಂದು
ಚಿನ್ನ ಬಿಂಬಿಸಲೆನ್ನ ದೃಷ್ಟಿಯಲ್ಲಿ
ಮಣ್ಣುಗುಡಿಯೊಳಗೆಲ್ಲ ರನ್ನದೀವಿಗೆವೆಳಗು
ಇನ್ನು ತುಂಬಿಸು ನಿನ್ನ ಸೃಷ್ಟಿಯಲ್ಲಿ.

# ಶಾಂತಕವಿಗಳ ವಿಶ್ರಾಂತಿ

ನಟ ತೆರೆಯ ಮರೆಯಾದ ಆಟ ತೀರಿಸಿಕೊಂಡು,
ಭಟ ಸಮರದಿಂದ ತೆರಳಿದ ಅರಸನರಮನೆಗೆ;
ಪಟು ಪಾಡುಗಾರ ತುಟಿ ಮುಚ್ಚಿದನು ನಾಡು—
ನುಡಿಗಳ ಹಾಡುಗಳನು ಹಾಡಿ.
ಆಟಮಟಿದ ಮಾತಲ್ಲ; ನಾಡೆ ನಾರಾಯಣನು,
ದಿಟವಾಗಿ 'ನುಡಿಯೆ ಸಿರಿ' ಎಂದು ಕೀರ್ತನೆಗೈದು
ಹಟದಿ ಕೀರ್ತನಗಾರ ಜವರನೊರಸಲು ಒಂದೆ
ಸರಿದ ವಿಶ್ರಾಂತಿಗಾಗಿ.

* * *

ಮುಪ್ಪಾಗಿ ಜರಿಯಾದ ಬಟ್ಟೆಯನು ಬೀಸಾಡಿ
ದಪ್ಪನ್ನ ಹೊಸದೊಡಿಗೆಯನು ಬೇಡಲಂಬರಕೆ
ಸಪ್ಪಗಿನ ನುಡಿಗಾಗಿ ಉಪ್ಪು ತರಹೋಗಿಪರು
ರಸವಂತಿಯಿರುವ ಕಡೆಗೆ
ಸಿಪ್ಪೆಯನೆ ಬಹು ದಿವಸ ಚೀಪಿ ಬೇಸರಪಟ್ಟು
ಅಪ್ಪನಲಿ ಹೊಸ ಹಣ್ಣು ಪಡೆಯಹೋಗಿಪರಿಂತು
ತಪ್ಪದೇ ತಿರುಗುತಿಹರೆಂದು ತಿಳಿಯಲಿ ಜನರು
ಬೆಳವೊಲದ ನಾಡಿಗಾಗಿ.

# ಚೆನ್ನ

ನನ್ನ ನಿನ್ನ ಬೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ.
ಮುಗಿಲ ತುಂಬಿ ಉಳಿದಿದೆ
ಗಾಳಿಯಂತೆ ಸುಳಿದಿದೆ
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ.

ಕೈಗೆ ಕೈಯು ಹತ್ತಿರಿದ್ದು, ಮೈಗೆ ಮೈಯು ಹತ್ತದು
ಕಣ್ಣು ಕಣ್ಣ ಮುತ್ತದು
ಎವೆಗಳನ್ನು ಎತ್ತದು.
ಮನದ ಮಾತು ಮಾತ್ರ ಮನದ ವರೆಗೆ ಬರದೆ ಬತ್ತದು
ಸುಳ್ಳು ಹಾದಿ ಸತ್ತದು.

ಕುಳಿತ ಹಾಗೆ ದೇಹವನ್ನು ಬೀಳಲುಗಳು ಬಿಗಿದಿವೆ.
ಮೈಯ್ಯ ಕೆಲಸ ಮುಗಿದಿವೆ.
ಚಿತ್ತದೂಟೆ ನೆಗೆದಿವೆ ;
ಜೀವದಾಳದಲ್ಲಿ ಮಡಗಿದಂಥ ಮುತ್ತನೊಗೆದಿವೆ.
ಮೇಲು ಹಾದಿ ಬೆಳಗಿದೆ.

ಯಾವ ಜನುಮದೊಂದು ರಾಗ ಈ ವಿರಾಗವಾಗಿದೆ?
ಬಾಳಗೊನೆಯು ಬಾಗಿದೆ
ಕಾಯಿ ಪಾಡು ಮಾಗಿದೆ.
ಜೀವದೋಟ ನೋಟವಾಗಿ ಮುಂದೆ ಮುಂದೆ ಸಾಗಿದೆ
ಎಲ್ಲೊ ಲೀನವಾಗಿದೆ.

# ಕವಿಶಿಷ್ಯ

ಕವಿಗಳಿಗೆ ಗುರುವು ತಾನೆಂಬ ಗರುವಿಕೆಯ ಮರು-
ಭೂಮಿಯ ಮರೀಚಿಕಾಜಲಪಾನಲೋಲನಾ-
ಗುವನು ಆರೆಗಳಿಗೆ. ಬಿಡಿಕರಡುಗವಿತೆಯ ಮೊದಲ
ಒಂದೆರಡು ಸಾಲುಗಳ ಲೀಲೆಯಲಿ ಬರೆದ ಬಡ-
ಗಬ್ಬಿಗನು ಕೂಡ ; ಸ್ವಕಪೋಲಕಲ್ಪಿತದ ಕೀ-
ರ್ತಿಯ ಪ್ರತಿಧ್ವನಿಯು ತುಂಬುವದು ಕಿವಿಗವಿಯನ್ನು,
ತನ್ನ ಕೈ ಹಿಡಿವರಾರಿನ್ನು ಇಳೆಯೊಳಗೆನುತ
ಸರಸತಿಯ ಕೈಪಿಡಿದ ಕನಸು ಕಾಣುವನಹಹ!

ಸುಕವಿ ಜನಮಿತ್ರ ; ನವ ಕವನಕ್ಕೆ ರನ್ನಗ-
ನ್ನುಡಿ ; ರಸಿಕ ; ಸರಸಿಗಳ ಮಧ್ಯದಲಿ ಸರಸಿ ; ಮು-
ಪ್ಪಿನಲಿ ಹರೆಯದ ಹಸಿರ, ಹಸುಳೆತನದಾ ಚಿಗುರ
ಕುಣಿಕುಣಿಸಿ ಕುಣಿದು ಕುಣಿಸಿದ ಮೂರ್ತಿವೆತ್ತ ತೆಂ-
ಗಾಳಿ ; ನೀ ಬಂದೆ—ಹಾ, ಪೋದೆ! ಸಾರಿದೆ ಜಗಕೆ :
ಕವಿಶಿಷ್ಯನೆಂಬುವಾ ಕೀರ್ತಿ ಕವಿಗೂ ಮೇಲು.

## ಚಿದಂಬರ

ಕುಲವಧುವಿನೊಲು, ಅಡಕದಲಿ ನಗುವ ಕೌತುಕ–ಕು-
ತೂಹಲದ ಕಣಿಯು ಕಣ್ಣಲ್ಲಿ ತೆರೆದು, 'ಮುಗಿಲ ನೀ–
ಲಿಯ ಕುಡಿದು ಬಿಳಿದು ಮಾಡುವೆ'ನೆಂದು ಹಸಿದ ಹ–
ಳ್ಳಿಯ ಹುಡುಗ! ಗುರುವೆನುವ ಗರುವಾಯಿಯಲಿ ನಿಂತಿ-
ರಲು ಇದಿರುಗೊಂಡೆ ನನ್ನನು ನೀನು, ಹುಡುಗ ಹಿಂ–
ಡಿನ ಪುಂಡತನದಿ ಬೆಳೆದವನನ್ನು, ಕನ್ನಡದ
ಕನ್ನಡಿಯು ಬೆಳಗಲಿತ್ತಾಗ, ಕಂಡೆವು ನಮ್ಮ
ರೂಪವನು. ಕನ್ನಡದ ಕಳಸ ಕಣಸಲಿ ಕಂಡೆ.

ಕನ್ನಡದ ಗುಡಿಯ ಕಟ್ಟುವ ಎಳೆಯ ಗೆಳೆಯರೊಲು
ನೀನು ಮೊದಲಿಗ ನನಗೆ, ಸ್ನೇಹ–ಸಿಂಹಾಸನದ
ಶೂನ್ಯ ಪೀಠದಿ ಪಟ್ಟಗಟ್ಟಿ, ಓರಿಗೆ ಜೊತೆಯ
ಎಳೆಯುರನು ಎರಡು ಕೈಯಲಿ ತಂದೆ. ಕಲ್ಲನಿ–
ಕ್ಕಿದೆ ಅಡಿಗೆ ; ಗುಡಿಗೆ ಗತಿ ಇಲ್ಲ. ಎಲ್ಲಿದೆ ಶಕ್ತಿ ?
ನಿಬ್ಬೆರಗುಗೊಂಡ ಹೆಬ್ಬಯಲು ಹಬ್ಬಿದೆ ಗೆಳೆಯ !

# ಪಂಪಾಯಾತ್ರೆ ಮತ್ತು ವಿ. ಸೀ.

೧

ಜೀವಕ್ಕೆ ಕಳೆ ಕಡಮೆ ಇರುವದುಂಟು
ಭಾವಕ್ಕು ಹುಸಿಬಣ್ಣ ಬರುವದುಂಟು.
ಜೀವಭಾವಕ್ಕೊಂದು ಸಾಂಗತ್ಯವಿಲ್ಲದಿರೆ
ಆಪಸರದ ಮಾಲೆಯನು ತರುವದುಂಟು
ಹೀಗಿಹುದ ನೋಡಿಹೆನು—ಎಂದಮೇಲೆ,
'ಹಾಳಿಗೂ ಬಾಳುಂಟೆ ?'
ಉಂಟು, ಉಂಟು !

೨

ನಾಲಗೆಗೆ ನಿಲುಕದಾ ನುಡಿಗಳುಂಟು
ನುಡಿಗಳಿಗು ನಿಲುಕದಾ ಭಾವವುಂಟು.
ಭಾವಗಳ ಬೀಸುಬಲೆಯಲ್ಲಿ ದೊರೆಯದ ನುಸುಳಿ
ದಾಟಿರುವ ನೈಜ ಬೇರೊಂದು ಉಂಟು.
ಹೀಗೆಂದು ಕೇಳಿದೆನು—ಎಂದಮೇಲೆ
'ಮೌನಕ್ಕೆ ಮಾತುಂಟೆ ?'
ಉಂಟು, ಉಂಟು !

## ತಂಗಿ ಜಾನಕಮ್ಮ

ತಂಗಿ ಜಾನಕಿ ನಿನ್ನ
ವೈದೇಹದೊಲವಿನಲಿ
ಓಲೆ ಬಂದಿತು ಒಂದು, ಇತ್ತ ತೇಲಿ
ಯಾರಿಗಾರೋ ಎನುವ
ನಾಸ್ತಿಕತೆಯನು ನೂಕಿ
ದಾಟಿ ದಿಕ್ಕಾಲಗಳ ಸುತ್ತು, ಬೇಲಿ.

ಕವಿಯು ಮಾನಸಪುತ್ರ
ಅವನು ಆಗಸದೇಹಿ
ಮಾತಿನಲೆ ಮೂಡವನು, ಭಾವಜೀವಿ,
ಮೈಯಾಚೆ ಉಸಿರಾಚೆ
ಬಗೆಯು ಬಣ್ಣಗಳಾಚೆ
ಅವನ ಹೂವರಳುವದು ಭಾವದೇವಿ.

ನೂರು ತಂಗಿಯರ ನಿ–
ರ್ನೆರದ ನೇಹದಿ ಮಿಂದು
ಮಿಂಚಿನಾಚೆಯ ಬೆಳಕ ಬಯಸಿ ಬಳೆದು
'ದೋಷರಾಹಿತ್ಯದಾ
ಕಲ್ಪನಾ ರಾಜ್ಯದೊಳು
ಸಗ್ಗದೂಟವನುಣುವ ರೂಪು ತಳೆದು.'

ಅದನು ನೀ ಕಂಡವಳು
ಬೇರೆ ಕಾಣಿಕೆಯೇಕೆ
ಕ್ಷೀರಸಾಗರದಲೆಯ ತಲೆಯ ಪೆರೆಯೋ
ಪೂರ್ಣವಾ ದೃಷ್ಟಿಯಲಿ
ತೆರೆದೊಂದು ಸೃಷ್ಟಿಯಲಿ
ನಿನ್ನ ನಂದನಕೇನು ಮುಚ್ಚುಮರೆಯೋ.

ಠೇಂಕೃತದ ಸುಳಿ ಹಿಡಿದು
ಅಂತರಂಗಕೆ ನುಗ್ಗು
ಕಮಲವನವಲ್ಲಿ ನಿಸ್ಸೀಮವಹುದು
ಭಾವಶಿಖರಗಳಲ್ಲೆ
ಜೀವಪುರ ನೆಲಸಿಹುದು
ಅದನು ನೀ ವೈದೇಹಿ ಕಾಣಬಹುದು.

ವಿಷಯ ವಿಷ ವಿಷಮವನು
ತಳ್ಳಿ ಪಂದತಲದಾಚೆ
ಸಪ್ತಸ್ವರ್ಗವ ಸೀಳಿ ಮೇಲೆ ಹಾರು
ಅಲ್ಲಿರುವ ನಲಿವೊಲವು
ಇಲ್ಲಿರುವ ಬಲ ಚೆಲುವು
ಮಿಕ್ಕಿ ಸೂಸುವ ಹಾಗೆ ಜಗಕೆ ಸಾರು.

## ಸಂಭಾವನೆ

ಕನ್ನಡದ ಶ್ರೀಕಂಠದಿಂದ ಸಾರಿದ ವಾಣಿ
ಅಂದು ವೀಣಾಪಾಣಿಯಾಗಿ ಬಾಜಿಸಲಾಗಿ
ಆ ರಾಗವೇ ಜನದ ಅನುರಾಗವೆನೆ ಮಾಗಿ
ರಾರಾಜಿಸುವದಿಂದು ರಾಷ್ಟ್ರಹೃದಯದ ರಾಣಿ
ಆ ಪ್ರಗಾಥದ ವಾಣಿ ನಾಡನೌಕೆಯ ನೂಗಿ
ಧ್ರುವಪ್ರವಾಸಕೆ ದಿಕ್ಕುಗಾಣಿಸುವ ಚುಕ್ಕಾಣಿ-
ಯಾಗೆಯುದ ಹೇಳುವ್ರೊಬ್ರೊಬ್ಬ ಕನ್ನಡ ಮಾಣಿ
ಮೆರೆವನಗೊ, ನಾಡನಂಬುಗೆಯ ಅಂಬಿಗನಾಗಿ.

ಇಂಥ ಉಜ್ವಲ ಚಿತ್ರದೊಂದು ಕೀರ್ತಿಪ್ರಭೆಗೆ
ಕಳೆಕಟ್ಟಬೇಡವೇ ಶ್ಯಾಮಸೀಮಾರೇಖೆ
ಎನೆ, ಅದರ ಹಿಂದೆ ನೆಳಲಾಗಿ ನೆಲಸಿದೆ ಛಾಯೆ
'ಇದುವೆ ಸಂಭಾವನೆಯೆ ನಿನ್ನ ಸೇವೆಗೆ ತಾಯೆ ?'
ಎಂಬ ಪ್ರಶ್ನೆಗೆ ಬಾನದನಿಯು ಸಾರಿತು ಸಭೆಗೆ
'ವಿಷ ನುಂಗೆ ಶ್ರೀಕಂಠ, ಬೇರೆ ಭೂಷಣ ಬೇಕೆ ?'

## ಜಯು ಜಯೂ ಗಾಂಧಿ ಮೋಹನಾ

ಜಯ ಜಯಾ ಗಾಂಧಿ ಮೋಹನಾ
ರಾಷ್ಟ್ರದೋಹನಾ
ಸತ್ಯಶರಣಾ–ಸತ್ಯಶರಣಾ

ಕಾದಿದಿರಿ ಶಾಂತಿಗೆ ಅಂತು
ಅಂತನಿ ಬಂತು
ಭೀಷ್ಮ ಮರಣಾ–ಭೀಷ್ಮ ಮರಣಾ

ಅಸರಂತ ನಿಮ್ಮ ಜೀವನಾ
ಒಂದೆ ಸಮ ರಣಾ
ಆತು ಕೊನಿಗೂ–ಆತು ಕೊನಿಗೂ

ಸೀಳಿದಿರಿ ಸಾವಿನ ತಲೀ
ಕೊಟ್ಟರೀ ಬಲೀ
ಕೀರ್ತಿಶನಿಗೂ–ಕೀರ್ತಿಶನಿಗೂ.

ಒಡದರ ನಿಮ್ಮ ಒಡಲೊ
ಬಂತು ಸಿಡಿಲು
ರಣಬೊಬ್ಬಿ ನಿಮ್ಮ ಹೆಸರೋ
ಏನು ಕುಸುರು

ಮಿಡಿದಿತ್ತು ಮಿಂಚಿನ ಕಾಂತಿ
ಮುಗಿಲಿನ ತಂತಿ
ಬಯಲಾತು ಮಾತಿನ ಭ್ರಾಂತಿ
ತಣ್ಣಸಿತು ಶಾಂತಿ
ಉದ್ಯದ ಕಾಳಿಯು ಕ್ರಾಂತಿ
–ಮಾನವೋತ್ಕ್ರಾಂತಿ

ಸ್ವಾತಂತ್ರ್ಯದೂತ ಜಯು ಜಯೂ
ಜಾತ ನಿರ್ಭಯಾ
ರಾಷ್ಟ್ರಹವನಾ–ರಾಷ್ಟ್ರಹವನಾ

ಕವಿಹೃದಯ ಜಾತ ಪ್ರೇರಣಾ
ಪ್ರೇಮಕಾರಣಾ
ಇಗೋ ಕವನಾ—ಇಗೋ ಕವನಾ
ಕರ್ನಾಟ ದೇಶದ ಜನಾ
ಕನ್ನಡಿಸಿತು ಮನಾ
ಹಾಡಿತು ಕವಿಗಣಾ
—ಜಯ ಜಯಾ....

* * *

ನೆನಸೇವು ನಿಮ್ಮ ಆ ನಗೀ
ಒಳಗೆ ಇಲ್ಲ ಥಗಿ
ಬರೇ ಬೆಳಕು—ಬರೇ ಬೆಳಕು
ನಿಂ ಮಾತು ಮಿಂಚಿನs ಗೆರಿ
ಎಲ್ಲಿ ಸರಿದೊರಿ
ಇಲ್ಲ ಅಳಕು—ಇಲ್ಲ ಅಳಕು
ನಿಮ ಕಾರ್ಯ—ಕಿರಿಬೆಳ್ಳಿನಾ ಸೆಲಿ
ಹಿಗ್ಗಿಧಾಂಗ ಹೊಳಿ
ಮುಂದ ಹರವು—ಮುಂದ ಹರವು
ನಿಮ್ ಹೃದಯದಾಗ ಇಲ್ಲ ಪಾಪ
ಶುದ್ಧ ನಿರ್ಲೇಪ
ಸದಾ ತೆರವೋ—ಸದಾ ತೆರವು
ನಿಮ ಚರಿತವಾಯಿತೊ ಕಥೀ
ಧರ್ಮದ ಗತೀ
ನಿನ್ನೊಳುಮಿಗಿಲ್ಲವೋ ನೆಲೀ
ಎಲ್ಲಿಯು ಬೆಲೀ
ವೈರಿಯನು ಕೂಡ ಒಳಗೊಂಡು
ಪ್ರೇಮವ ಕಂಡು
ಅಬಲೆಯರ ಬಾಲಕರ ಹಿಡಿ[illegible]
ಮಾಡಿ[illegible]

ಮಾರಿದಿರಿ ಭೇದದ ಸಂದು
ವಿಶ್ವದ ಬಂಧು
ನಿಮ ಸೋಲಿಗೂ ಕೊನೆಗೂ ಜಯಾ
ಯಾರಿಗಿದೆ ಭಯಾ
ನಿತ್ಯಕರುಣಾ–ನಿತ್ಯಕರುಣಾ
ನೀವಿಟ್ಟ ಒಂದೊಂದs ಅಡಿ
ಮುಕ್ತಿಯ ಗಡಿ
ಬಂಧಹರಣಾ–ಬಂಧಹರಣ
ರಾಮನಾಮದಾಗ ನಿಮ್ಮ ಪ್ರೇಮಾ
ಅದೆ ನಿಂ ನೇಮಾ
ಕೊನೀಮೊದಲು–ಕೊನೀಮೊದಲು
-ಜಯ ಜಯಾ...

* * *

ಎಲ್ಲರಿಗು ಅವರವರ ರೀತಿ
ಬೇರೆ ಬೇರೆ ಪ್ರೀತಿ
ಇಲ್ಲ ತೊದಲು-ಇಲ್ಲ ತೊದಲು
ಬಟಾಬಯಲಿನ್ಯಾಗ ನಿಂ ರಾಜ್ಯ
ಮೋಸದ ಕೂಡ ವ್ಯಾಜ್ಯ
ಸುತ್ತು ದಾಳಿ–ಸುತ್ತು ದಾಳಿ
ನಿಂ ಚಢಾಯಿ ಮಾಡುವ ನೀತಿ
ಆಸಲ್ ನಿರ್ಭೀತಿ
ಹೇಳಿಕೇಳಿ–ಹೇಳಿಕೇಳಿ
ಛಲ ಬಲ ಇದ್ದು ಧೀರಾs
ಎಂಥ ಶೂರಾs
ಆಸಕ್ತಿ ಇಲ್ಲದಾ ವೀರಾ
ಪುಟ್ಟಪೂರಾ
ನಿಂ ಸ್ಮರಣ ಸ್ವರಾಜ್ಯದ ಹರಣಾ-
ದೀನ ಉದ್ಧರಣಾ

ನಿಂ ಚರಣ ದಾಸ್ಯ ಸಂತರಣಾ-
ದೃಷ್ಟಿ ವಿಸ್ತರಣಾ-
ಸುತ್ತಿರಲು ತಿಮಿರದಾವರಣಾ-
ಆಶೆಯಾ ಕಿರಣಾ
ವರುವರುಷದ ಶಾದ್ಧದ ದಿನ
ಶ್ರದ್ಧೆಯ ಧನ
ಉಪ್ಪಿನ ರಿಣಾ-ಉಪ್ಪಿನ ರಿಣಾ
-ಜಯ ಜಯಾ....

* * *

ತಿರಗತsದ ನೂಲಿನ ರಾಟಿ
ಕದನ ಹೊಸ ಧಾಟಿ
. ಕೇಳು ಸುಗುಣಾ-ಕೇಳು ಸುಗುಣಾ.
ನಿಂ ಗುಣ ಆಕಾಶದ ಚುಕ್ಕಿ
ಪಡೆಧಾಂಗ ರೆಕ್ಕಿ
ಕುಣಿತಾವ ಮುಂದ-ಕುಣಿತಾವ ಮುಂದ
ಅಂಬಿಕಾತನಯನ ಬಂಧ
ಸಮುದ್ರದ ಅಂದ
ಭಾವ ಭವನಾ-ಭಾವ ಭವನಾ
ಸ್ವಾತಂತ್ರ್ಯಜೇತ ಜಯಜಯಾ
ಹುಟ್ಟಾ ನಿರ್ಭಯಾ
ದೇವ ಹವನಾ-ದೇವ ಹವನಾ
ಕವಿಹೃದಯ ದೀಪ್ತ ಭಾವನಾ
ಪ್ರೇಮ ಜೀವನಾ
ಕರುಣ-ಕವನಾ-ಸ್ಮರಣಕವನಾ,

# ನಲ್ ತಾಯಿ

ತಿಳುವಳಿಕೆಯಂಥ ತಿಳಿಗೇಡಿ ಎಲ್ಲಿಯು ಇಲ್ಲ ।
ಕಳಕೊಂಡ ಹೊರತು ಬೆಲೆಯರಿಯುದದು ಫಲವಿಲ್ಲ ॥

ಇದ್ದಾಗ ತಿಳಿಯಲಿಲ್ಲೆನ್ನ ತಿಳಿವು ।
ಮುದ್ದಾಡಿಕೊಳ್ಳುವಷ್ಟರಲ್ಲಿ ಒಂದಿತಳಿವು ॥
ಯಾವ ಜನ್ಮದಲಿನ್ನು ರಿಣವ ತೀರಿಸಲಿ ।
ಯಾವ ಸೇವೆಯ ಮಾಡಿ ಹೆಸರ ಬೀರಿಸಲಿ ॥

ಹೊತ್ತುಹೊತ್ತಿಗೆ ನಿನ್ನ ಯೋಗವನು ಕ್ಷೇಮವನು ।
ಗೊತ್ತುಪಡಿಸೌ. ನಿನ್ನ ನೆನವಿಯಲಿ ಯಾಮವನು ॥
ಕಳೆಯುವುದೆ ನೇಮವಾಗಿದೆ ಜೀವಕಿನ್ನು ।
ಬಳಿಕಿ ಉಳಿಯಲಿ ತಾಯೆ ಇನ್ನು ಮುನ್ನು ॥

ವ್ರಣ ನೋಡಿ ಬಂದದರ ಮೇಲ್ಕೂತ ನೊಣದಂತೆ ।
ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ ? ॥
ಕಕ್ಕುವಿಯೆ? ನೆಕ್ಕುವಿಯೆ? ಮಾಯದಾ ಗಾಯ ।
ಬಿಕ್ಕಿಲ್ಲ ಬಿಕ್ಕಿದರು ನೂರಿಂಥ ಕಾಯ ॥
ಧರಿಸಿದರು ನಿನ್ನಂಥ ತಾಯಿ ಸಿಕ್ಕಾಳೇ ? ।
ಹರಸೆನ್ನ 'ಬಾ ಮಗುವೆ' ಎಂದು ನಕ್ಕಾಳೆ? ॥
ಮುಂಗೆಟ್ಟ ಖೋಡಿ! ಮರಣವ ನೋಡಲಿಲ್ಲ ।
ಕಂಗೆಟ್ಟು ಆಶಿಸವ ಬೇಡಲಿಲ್ಲ ॥
ಅಯ್ಯೊ! ಬಾಗಿ ಆಶೀರ್ವಾದ ಬೇಡಲಿಲ್ಲ ।
ಅಯ್ಯೊ! ಕಡೆಯ ಆಶೀರ್ವಾದ ಬೇಡಲಿಲ್ಲ ॥

# ರಾಮರಾಮಾ !

ಕರುವಿನ ಕರೆ ಕೇಳಿ ತೊರೆಗರೆಯದ ಹಸು।
ಇರಬಹುದೇನೆಲ್ಲಿ ರಾಮರಾಮಾ॥
ಮರುಗುವ ಮರಿಗಾಗಿ ಎರಕವನೆರೆಯದ।
ಮರುಕವು ಮರುಕವೆ ರಾಮರಾಮಾ॥

ಮರುಗು ಮರುಕವು ಕೂಡಿ ಎರಡಲ್ಲ ಒಂದಹುದು।
ಎರಕ ಹೊಯ್ದಂತದು ರಾಮರಾಮಾ॥
ಮರುದನಿ ಸರದಂತೆ ನೆರವಾಗಿ ಇರುವವು।
ಎರವಾಗಬಹುದೇನು ರಾಮರಾಮಾ॥

ಮಗುವು ನೀರಡಿಸಿರೆ ಶರದಿಂದ ಕರೆಯಲು
ಲಗುಬಗೆಯಿಂದಲಿ ರಾಮರಾಮಾ॥
ಮುಗಿಲಿಗೆ ಪಾರ್ವಂತೆ ಪಾತಾಳಗಂಗೆಯು।
ನೆಗೆದಳೂಟೆಯಾಗಿ ರಾಮರಾಮಾ॥

ಅಂಬುವನೆಸೆದರು ಅಂಬುವನೆ ಕರೆಯುವ।
ಅಂಬೆಯೆ ಅಂಬೆಯು ರಾಮರಾಮಾ॥
ಬೆಂಬಲವಿಲ್ಲದ 'ಹಂಬಾ' ಎಂಬಾ ಕರೆಯು।
ಹಂಬಲದರ್ಥವೇನ್ ರಾಮರಾಮಾ॥

ತುಂಬಿಯುಂತಂಬೆಯು ಮರುಂಗಿನ ಹೂನೀರ।
ಚುಂಬಿಸಿದೊಡನಲ್ಲಿ ರಾಮರಾಮಾ॥
ತುಂಬೆಲ್ಲ ಮರುಕದ ಜೇನು ತುಂಬುವದೇನ-।
ಸಂಭವವೇ ಪೇಳು ರಾಮರಾಮಾ॥

ಮಡಿ ನೀಡು ಎಂದಂದೂ ಅಡಿಗಡಿಗೆ ನುಡಿಯುವ।
ಕಡುಮಮತೆಯು ತಮ್ಮ ರಾಮರಾಮಾ ॥
ಮಡುವಾಗು ನಲ್ಲಮ್ಮ ಒಕ್ಕಲಿಹ ಮಡಿವಳತಿ ।
ಮಡಿಗೊಳಿಸೆನ್ನೆಂದೆ ರಾಮರಾಮಾ ॥

ತೀರ್ಥರೂಪಳು ನೀನು ತೀರ್ಥವಾಗುವದೇನು ।
ಸಾರ್ಥಕವಲ್ಲವೆ ರಾಮರಾಮಾ ॥
ಸಾರ್ಥಪರಮಾರ್ಥದ ವೀಥಿಯು ತೋರೆಂದು ।
ಪ್ರಾರ್ಥಿಸಿದೆನವಳ ರಾಮರಾಮಾ ॥

ಕಲೆ ತೊಳೆದು ಬೆಳಗುವ ಕೈಯು ಕೆಸರೆಂಬಂತೆ ।
ಮಲಿನವಾಗಲು ಬಹುದೆ ರಾಮರಾಮಾ ॥
ಮಲೆತದ್ದು ಮಾಸಿದ್ದು ಕಳೆಯುವ ಮಡಿವಳ ।
ಹೊಲೆಯಾಗಿ ಸಾಗೀತೇ ರಾಮರಾಮಾ॥

ಮುಟ್ಟು ಮೈಲಿಗೆಯುಳ್ಳ ತಟ್ಟಿ ಮೈಲ್ಲಿಗೆಯಾದ ।
ಕೆಟ್ಟು ಮೈಲಿಗೆಯಿರುವ ರಾಮರಾಮಾ ॥
ಮೊಟ್ಟೆಯು ಮಡಿವಳ ಜಗದ ಪಾತಕಗಳ ।
ತೊಟ್ಟಿ ಪರಮೇಶ್ವರಿ ರಾಮರಾಮಾ ॥

ಕಲುಷದ ತವರೂರು ಮಣ್ಣಿನ ಬಸುರಲಿ ।
ಸೆಲೆನೀರಿನಂತಿಹಳು ರಾಮರಾಮಾ ॥
ಮಲಿನದ ನೆಲೆವೀಡು ಮಾಂಸದ ಮನೆಯಲಿ ।
ಮೊಲೆಹಾಲಿನಂತಿಹಳು ರಾಮರಾಮಾ॥

ಮೈಲಿಗೆ ಎಂಬುದನು ಮೈ ದಾಟಗೊಡದಂಥ ।
ಶೈಲಿಯನು ಕಲಿಸೆಂದೆ ರಾಮರಾಮಾ ॥
ಕಾಲಿಗೆ ಬಿದ್ದೆನು ಕೈಮುಗಿದು ಇದ್ದೆನು ।
ನಾಲಿಗೆ ಬಿಗಿದಿಟ್ಟು ರಾಮರಾಮಾ ॥

ಉಟ್ಟ ಬಟ್ಟೆಯೊಂದೇ ತೊಟ್ಟ ಬಟ್ಟೆಯೊಂದೇ ।
ಮುಟ್ಟಬೇಕಾದಂಥ ರಾಮುರಾಮಾ ॥
ಬಟ್ಟೆಯೊಂದೇ ಉಂಟು ಜಗದೆಲ್ಲ ಮಡಿವಳರ ।
ಬಟ್ಟೆಯೊಂದೇ ಐಸೆ ರಾಮುರಾಮಾ ॥

ಕಡೆಯು ಲೋಕದೊಳಿಹ ಕರುಳ ಮಡಿವಳ ಗಂಗೆ।
ಜಡೆಬಿಟ್ಟು ಕಡೆಗಿಳಿದು ರಾಮುರಾಮಾ॥
ಅಡಿಯ ಉಂಗುಟದಿಂದ ಮುಡಿಯು ಬಾಗಿಲು ತೆರೆದು।
ಕುಡಿವಾಲಿನಂದದಿ ರಾಮುರಾಮಾ ॥

ಮೀಸಲ ತೊರೆಯಾಗಿ ಈಸಲ ಬಂದಿದೆ ।
ಸೂಸಲ ನೆರೆಯಲ್ಲಿ ರಾಮುರಾಮಾ॥
ಬೀಸಲೂ ಮನದಲ್ಲಿ ಉತ್ಸಾಹ ಜೀವಾಳ ।
ಈಸಲು ಬಿದ್ದಿತು ರಾಮುರಾಮಾ ॥

ಪಕ್ಷಿತೀರ್ಥದ ಮೇಲೆ ಪಾಯುಸವಿಡುವಂತೆ ।
ಪಕ್ಷಿಗಳಿಗಾಗೆಂದು ರಾಮುರಾಮಾ ॥
ನಕ್ಷತ್ರದೊಡೆಯನು ನಿನಗಿಲ್ಲಿ ಪಾವಿತ್ರ್ಯ ।
ಅಕ್ಷಯುವಾಗಿಡಲಿ ರಾಮುರಾಮಾ ॥

ಅಣ್ಣೆಯುಗಡಲಿನ ತಣ್ಣನ್ನ ತಿಳಿಯಲ್ಲಿ ।
ಬೆಣ್ಣೆಯಾಗುತ ತೇಲು ರಾಮುರಾಮಾ ।
ಅಣ್ಣಾವುಣ್ಣನ ಮೈಯಂತು ಮೈಯೆಲ್ಲ ।
ಕಣ್ಣಾಗಿ ಹೊಳೆಹೊಳೆ ರಾಮುರಾಮಾ ॥

ತಾಯ್ಗರೆದ ಕಂಬನಿ ಬಾಯ್ದೆರೆದ ಸಿಂಪಿನಲಿ ।
ಕಾಯ್ಗೊಂಡು ಹಣ್ಣಾಗಿ ರಾಮುರಾಮಾ॥
ಮೈಗರೆದ ಮುದ್ದಲ್ಲಿ ಮೈದೆರೆದು ಮುತ್ತಹುದು ।
ಕೈಯ್ಯಾರಿಯಾರಿವಳು ರಾಮುರಾಮಾ ॥

ಕಡಿಯಂತು ಕಡಿಯೆಲ್ಲ, ಹುಡಿಯಂತು ಹುಡಿಯೆಲ್ಲ।
ಹುಡಿಯ ಗೂಡಹುದ್ಯೆಸೆ ರಾಮರಾಮಾ॥
ಗುಡಿಯೆ ಮಡಿಯ ನಾಡು ಎಂದೆಂಬ ಜಾಣರ।
ನುಡಿಯ ಒಳವೇನಿಹುದು ರಾಮರಾಮಾ॥

'ಮಡಿಯ ಕುಡಿಗೇ ಗುಡಿ ಗುಡಿಯ ಅಡಿಗೇ ಮಡಿ'।
ನುಡಿಯೊಂದು ದಿಟವುಂಟು ರಾಮರಾಮಾ॥
ಕಡೆಮುಟ್ಟುವೀ ಮಾತು ನನ್ನಪಾಡಿನ ಪಲ್ಲ।
ಕಡೆವರಗಾಗಿರಲಿ ರಾಮ:ರಾಮಾ॥

ಮೀಟಾದ ಮಡಿಯೊಂದು ನಿಖಿಲ ಪಂಥಕ್ಕೆಲ್ಲ।
ಕೂಟಿನಂತಿರುವದು ರಾಮರಾಮಾ॥
ಕೂಟಕೂಟಗಳುಂಟು ಜೀವ ಜೀವಾಳದ।
ಬೇಟದ ಪರಿಯಂತೆ ರಾಮರಾಮಾ॥

# ಹರಕೆ

ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ
ಸಕಲ ತೀರ್ಥದ ಕ್ಷೀರ ತಂದು,
ಬೆರಗಾಗಿ ಬೆರೆತು ಆ ಶಿವನಲಿ, ದೇವನಲಿ
'ಪಡೆದಪ್ಪನಾಗು' ಎಂದು.

ನಿಃಸಂಗಳಿದ್ದ ಈ ಗುಪ್ತಗಂಗೆಯು ನನ್ನ
ಶಾಲ್ಮಲೆಯ ನೀರ ತಂದು.
ನಿಃಶಂಕನಾಗಿ ಬೆರೆಯೆಂದು ಎರೆಯುವೆನೆಂದು
'ಪಡೆದಪ್ಪನಾಗು' ಎಂದು.

ಹರಿಹರರ ಕಾಲ್ತೊಳೆವ ದಕ್ಷಿಣದ ಗಂಗೆಯೀ
ತುಂಗಭದ್ರೆಯ ಪುಣ್ಯಜಲವ ತಂದು
ಎರೆಯುವೆನು ನಿನ್ನನ್ನು ಸಮರಸಿಯು ಆಗೆಂದು
'ಪಡೆದಪ್ಪನಾಗು' ಎಂದು,

ನಮ್ಮ ತಾಯಿಯ ಸೆರಗಿನಂಚಾಗಿ ಹರಿದಿದ್ದ
ಭವ್ಯಗೋದೆಯ ದಿವ್ಯಜಲವ ತಂದು
ತಮ್ಮ ಎರೆಯುವ ಸೆರಗು ಬೆರಗಿಲ್ಲದಂಥ ಕಲಿ–
'ಪಡೆದಪ್ಪನಾಗು' ಎಂದು.

ನಮ್ಮ ತಾಯಿಯ ದಿವ್ಯ ಶ್ರೀರಂಗ ಪಾದವನು
ತೊಳೆವ ಕಾವೇರಿಯಾ ನೀರ ತಂದು
ತಮ್ಮ ಎರೆಯುವೆನು ಶ್ರೀಪಾದರೇಣುವೆ ಬಾರೊ
'ಪಡೆದಪ್ಪನಾಗು' ಎಂದು.

ಇಟ್ಟಿಗೆಯ ಮೇಲೆ ಅಡಿಯಿಟ್ಟ ವಿಠ್ಠಲನನ್ನು
ಬಿಟ್ಟು ಮುಟ್ಟುವ ನದಿಯ ನೀರ ತಂದು
ಮೆಟ್ಟು–ಭಕ್ತಿಯ ಮೆಟ್ಟು–ಎರೆಯುವೆನು ನಾನಿಂದು
'ಪಡೆದಪ್ಪನಾಗು' ಎಂದು.

ಘಟ್ಟ ಮಲೆಗಳ ಬಿಟ್ಟು, ತಾರಕರ ಬಿರುದಿಟ್ಟು
ಹರಿವ ನದಿಗಳ ಮಡಿಯ ನೀರ ತಂದು
ಬಿಟ್ಟುಬಿಡದಲೆ ನಾನು ಎರೆಯುವೆನು ನಿನ್ನನ್ನು
'ಪಡೆದಪ್ಪನಾಗು' ಎಂದು.

ಕರಿನಾಡ ಕನ್ಯೆ ಈ ಕೃಷ್ಣೆ ಕೇಳುವದೇನು ?
ನಿನ್ನ ಕೂಡಲದಿಂದ ನೀರ ತಂದು
ಎರೆಯುವೆನು–ಅರಿವಾಗು–ತಾನೆ ತಾನಾಗಿನ್ನು
'ಪಡೆದಪ್ಪನಾಗು' ಎಂದು.

ಕನ್ನಡದ ನಾಡ ಕವಿಕುಲತಿಲಕರಾ ಕಾವ್ಯ
ಗಂಗಾಪ್ರವಾಹವೆಲ್ಲಿಂದ ಬಂತೋ
ಘನ್ನ ತೀರ್ಥಂಕರರ ಆ ಪೂಜ್ಯ ಪಾದಗಳ
ತೀರ್ಥದಿಂದೆರೆಯುವೆನು ನಿನ್ನನಿಂತೋ.

ಕಲ್ಯಾಣದಧ್ಯಕ್ಷನಾದ ಪ್ರಭು ಅಲ್ಲಮನ
ಗುರುಪಾದ ತೀರ್ಥ ತಂದು
'ಕಲ್ಯಾಣ ಕಲ್ಯಾಣ' ಎರೆಯುವೆನು ಶಿರಬಾಗು
ಶಿವಶರಣನಾಗು ಎಂದು.

ಉಡುಪಿಯೊಡೆಯನ ಅಡಿಯನುಡುಂಪು ಮಾಡುವ ನಮ್ಮ
ಆನಂದತೀರ್ಥ ತಂದು
ಮುಡಿಯಲ್ಲಿ ಧಾರೆಯಾಗಿಡುವೆ ಪುರುಷೋತ್ತಮನ
ದಾಸ ನೀನಾಗು ಎಂದು.

ಹಂಪುಗೊಳಿಸುವ ದೇವಿಯೊಲಿದ ಮಾದವನ ವಿ-
ದ್ಯಾತೀರ್ಥವನ್ನು ತಂದು
ಹಂಪು ಪಡೆಯೆಂದು ನಾ ಎರೆಯುವೆನು ನೀ ಸರ್ವ—
ಸಂನ್ಯಾಸಿಯಾಗು ಎಂದು.

ಈ ನಾಡು ಅವನ ಹೊಲ! ಇದರವೊಕ್ಕಲಿಗನವ
ನಾ ನೀನು ರಂಟೆ ಕುಂಟೆ.
ಏನಾದರೇನು ಗೆಲವಿಹುದು ನೀನಿರಬೇಡ
ಸೋಲೆಂಬ ಚಿಂತೆಗಂಟೆ.

ಜಗದ ಪಟ್ಟವನೇರಿ ಕುಳಿತಿಹ ಜಗದ್ಗುರುವು
ನಮ್ಮ ಕರುನಾಡಿನಲಿ ಕಾಲನಿಟ್ಟು
ಮುಗಿದು ಎದೆ ಮುಗುಳನ್ನು ಅಡಿಯ ಹುಡಿಯಾಗೋಣ
ಇಲ್ಲ ಸಲ್ಲದ ಬಗೆಗಳೇಕೆ ಇಷ್ಟು ?

'ಸೋಲು' ಎಂಬುದು ಕೇಳು ಮೃತ್ಯುಲೋಕದ ಸೊಲ್ಲು
'ಗೆಲುವು' ಒಂದೇ ಬಲ್ಲ ನಮ್ಮ ನಲ್ಲ.
'ಸೋಲು' ಹುಂಬರ ಗುಲ್ಲು. 'ಗೆಲುವು' ಕಾಣ್ಬರ ಸೊಲ್ಲು
ಸೋಲುವವ ತಾನೆಂದು ಶರಣನಲ್ಲ.

ಉಸುರ ಉಸುರಿಗೆ ಅವನ ಹೆಸರ ಸಾರುತ್ತಿರುವ
ಗಾಳಿಯಿಂದದಿ ನಾವು ಚರಿಸಬೇಕು.
ಹೆಸರು ಹೆಸರಿಗೆ ಅವನ ಕುಸುರು ತೋರುವ ಹಾಗೆ
ಬೆಳಕನ್ನು ಸುರಿಸಬೇಕು.

ತಾಪ ಕಂಡಲ್ಲೆಲ್ಲ ನಮ್ಮ ಸಂಪ್ರೀತಿಯನು
ನೀರಾಗಿ ಹರಿಸಬೇಕು.
ಪಾಪ! ಪತಿತರ ಕಂಡು ಕೈನೀಡಿ ನೆಲೆಗೊಟ್ಟು
ನೆಲವಾಗಿ ಧರಿಸಬೇಕು.

ಅಣುರೇಣು ತೃಣಕಾಷ್ಠ ಪತಿತಪಾವನರ ಮುಗಿ-
ಲಾಗಿ ಆವರಿಸಬೇಕು.
ಅಣುವಿಗೂ ಅಣುವಾಗಿ ಮುಗಿಲಿಗೂ ಮುಸುಕಾಗಿ
ಅವನ ಆಜ್ಞೆಯ ನಾವು ಸ್ಮರಿಸಬೇಕು.

ಪಡೆದಪ್ಪನಾಗದೇ ದುಡಿದಪ್ಪನಾದವಗೆ
ಚಿಂತೆ ನೆರೆಯುವದೊಂದು ಸಂತೆಯಾಗಿ.
ಪಡೆದು ದುಡಿದವ ಜಾಣ ವ್ಯಸ್ತನಾದವ ಕೋಣ
ಆಗ ಬಾರದು ಹಿಂತೆ – ಮುಂತೆಯಾಗಿ.

ದೇವನಲ್ಲಿ ನಿವೃತ್ತಿ, ದೇವನಿಂದೆ ಪ್ರವೃತ್ತಿ
ಈ ಹಾದಿಹರಿಯಬೇಕು.
ಜೀವಬಂಧುವೆ! ಕೇಳು, ಉಳಿದ ಜಂಜಾಲವನು
ತಾನಾಗಿ ಮರೆಯಬೇಕು.

* * *

ಗುರುವಂ ಮರೆಯಬೇಡೈ ಗೆಳೆಯಾ । ಗುರುಬಂಧುವೇ ।
ಅರುಹಂ ತೊರೆಯಬೇಡೈ ಒಲವೇ । ಸ್ನೇಹಸಿಂಧುವೇ ॥

## ಶ್ರೀಅರವಿಂದರಿಗೆ

ನಿನ್ನಾ ಹುಬ್ಬಿನ ಇಬ್ಬದಿ
ಗರಿ ಚಾಚಿದೆ ಗರುಡ
ಬಾನ್ಗಣ್ಣಾಗಿಹೆ ನೀ, ನಾ
ಗುರಿಯಿಲ್ಲದ ಕುರುಡ.

ಕಣ್ಣಿವೆ ಚಾಟಿಗೆ ಕಟ್ಟಿದೆ
ಆನಂದದ ಹುಟ್ಟು.
ಒಳಗಿದೆ ಹೂವರಳಿದವೊಲು
ವಿಶ್ವದ ಇಡಿಗುಟ್ಟು!

ಕೊಡು ತಂದೇ, ಇನ್ನೊಂದೇ
ಒಂದೇ ಬಾಯ್ಮುಟುಕು.
ಕೊಡು ತಾಯೇ ಇನ್ನೊಮ್ಮೇ
ಒಮ್ಮೇ ಎದೆಗುಟುಕು.

# ಶ್ರೀಮಾತೃಶ್ರೀಗೆ

ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು.

ಕಂಗಳಿಂದಲೆ ಸುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು.

# ಗೆಳೆಯ ಶಂಕರಗೌಡರಿಗೆ

ಶಿವಾಯ ನಮ ಓಂ ಶಿವಾಯ ನಮಃ ದಿಮಡಿ ಮಿಡಿಯುತ್ತಿತ್ತು.
ಏಕನಾದವೂ ಶಿವಾಯ ನಮ ಓಂ ಶ್ರುತಿಯ ಹಿಡಿಯುತ್ತಿತ್ತು.
ಶಿವಾಯ ನಮ ಓಂ ಬಯಲಿನಲ್ಲಿ ಪಡಿನುಡಿಯು ಸಿಡಿಯುತ್ತಿತ್ತು.

ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿ ಗುದ್ದಿ.
ಗೆಳೆಯ, ನೀವು ಮೈಗರೆದಿರೆಂದು ಛಿ! ನಂಬಬರದ ಸುದ್ದಿ.
ಎಡದ ಮೈಯ ನಡುಗಿಸುತ ಬಂತು, ಕ್ಷಣ ಮಂಕು ಆಯ್ತು ಬುದ್ಧಿ.

ನನ್ನ ಜೀವನದಿ ನೀವು ತೇಲಿದಿರಿ ಚುಕ್ಕಿ ತೇಲುವಂತೆ.
ಗೆಲುವಿನಲ್ಲೆ ಒಳಸೋತಿರಣ್ಣ ಸವಿಗೆಳೆಯ ಸೋಲುವಂತೆ.
ಆಪತ್ತಿನಲ್ಲಿ ಸಂಪತ್ತಿನಲ್ಲಿ ನೇರವಾಗಿ ಸಾಲುವಂತೆ.

ನಿಮ್ಮ ಸ್ನೇಹರಥುರಿ ಏಕತಾನ ಸ್ವರಮೇಳದಂತಭಂಗ.
ದಾಸೋಹ ಶರಣ ಜೀವನದ ರೀತಿ ಕಂಡಿತ್ತು ದೇವಲಿಂಗ.
ನಿಮ್ಮ ಅಭಿರುಚಿಯ ಗಂಧಮೂರ್ತಿ ಪ್ರದ್ಯುಮ್ನನಾದನಂಗ.

ಮೂಡಲದ ಕಡಲ ಗುಡುಗಾಟದೊಡನೆ ಸಂಗಡಿಗನಾಗೆ ಬಂತು.
ತಂತಂತಿಯಾಗಿ ಸರಿಜೀರು ಹಿಡಿದಿಹುದು ನಿಮ್ಮ ಜೀವತಂತು.
ಆ ದಿವ್ಯಜೀವನದ ಸವಿಯ ನೋಡಿ ನಂಬಿಗೆಯು ನೆಲಸಿ ನೋಂತು.

ಒಬ್ಬರಾಗಿ ಬರಲಿಲ್ಲ ನೀವು, ಹಲವೊಬ್ಬರಾಗಿ ಬಂದು
ಏರಿದಿರಿ ಮುಂದೆ, ಸಾರಿದಿರಿ ಹಿಂದೆ, ಸರಿ ಒಕ್ಕಲಾಗಿ ನಿಂದು
ಬೆಳೆಯುವಾಗಲೇ ಮೇಲಿನವರಿಗೂ ಗೊಬ್ಬರಾಗಿ ಎಂದು.

ಒಂಟಿಮರಿಗೆಯಲಿ ಹಳ್ಳ ಹಿಡಿದು ಹೋಗುತ್ತಲಿತ್ತು ನೀರು.
ಕಂಠದಲ್ಲಿ ನೆಲೆಗೊಂಡು ಇತ್ತು ಕನ್ನಡದ ತಾಯಿಬೇರು.
ಬಯಲಸೀಮೆಯಲಿ ಉರುಳುತ್ತಿತ್ತು ಪ್ರಭುದೇವರೊಂದು ತೇರು.

ದಾನವಾಗಿ ಮಂಡಿತ್ತು ಜನರ ಅಜ್ಞಾನಕೆನ್ನ ಕ್ಷೋಭ.
ನಿಮ್ಮ ಮೌನ ಮನೆಮಾಡಿ ಇತ್ತು ಸಾಹಿತ್ಯ ರಸಿಕ ಲೋಭ.
ಕನ್ನಡಕ್ಕೆ ನೀರೆರೆದ ಲೋಭದಲಿ ನಾಡಿಗಾಯ್ತು ಲಾಭ,

ನಿಮ್ಮ ಬದುಕು ಕಾಶ್ಮೀರಿ ಶಾಲು, ಅದು ಅಲ್ಲ ತೇಪ ಕವನ.
ಆದರೇನು ಅನುರಾಗಕಪುದು ವೈರಾಗ್ಯಕೂನು ಹೌದೇ.
ತಾಯಿ ಅಪ್ಪನೆಂದೊಪ್ಪದವನು ತಂದೆಯನು ಅಪ್ಪಬಹುದೇ?

ಶ್ರಾವಣಕ್ಕೆ ಶ್ರುತಿ ಮಿಡಿಸಿ ಬಂತೊ, ಹಗಲಲ್ಲಿ ಇರಿಸಿ ಕಂಥೆ
ಜೋಗಿ ಎದ್ದಂತೆ ಅಲಕನೆನ್ನು ಮುಗಿಸಿದಿರಿ ಒಂದು ಸಂಥೆ,
ಏರು ಜೀರಿನಲಿ ರಾಗ ನಡೆದಿರಲು ತಂತಿ ಹರಿಯುವಂತೆ.

ಬಾಳಿನಲಿ ಕೈಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು.
ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನ್ನು
ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಹುಣ್ಣುಗಳನು.

ಭೋಗದಲಿ ಜೊತೆಯಾಗಿ ಬೆಳೆದು ರೋಗಕ್ಕು ಪ್ರೈಯ ಮಸೆದು
ಯೋಗಕಾಗಿ ಪಾಡಾಗಿ ಬಂದು ಗುರುಪಾದಕ್ಕಾಗಿ ಒಸೆದು
ಜೊತೆಗೆ ನೋವಿನಲಿ ಜೊತೆಗೆ ಸಾವಿನಲಿ ಆದ ರೀತಿ ಹೊಸದು.

ಒಕ್ಕಲಿಗರಂತೆ ಒಕ್ಕಲಿಗರಾಗಿ ಸೇಗಿಲಪೆ ಮುದ್ರೆ ಮಾಡಿ
ನಾಳೆ ಬರುವ ಬೆಳೆಗಾಗಿ ಕಾದ ಹೊಲದಲ್ಲಿ ಪಾಗ ನೋಡಿ
ತಾಯಿ ತಂದೆಗಳ ಪಾದದಲ್ಲಿ ಮಲಗಿದಿರಿ ಬರಲು ಮೂಡಿ.

ಕಲ್ಲುಮಂಟಪದ ನೆರಳಿನಲ್ಲಿ ಮಲಗದಿರಿ ಒಂದು ಬಾವು
ಯಜಮಾನರೆಲ್ಲೊ ಆ ಬಲಕೆ ನೀವು ತೋರಿಸಲು ನಿಮ್ಮ ಠಾವು.
ಅಮರ ಜೀವನಕೆ ಸಾಕ್ಷಿಯಾಗಿ ಮೂಡಿಹುದು ಅಡಕೆ ಹೂವು.

## ಮೌನವಾರ

ಮಾತುಗಳಾಚೆಯ ವಿದೇಹಭಾವ
ಸದೇಹವಾಗಲು ತಪಿಸುತಿವೆ
ಅಶೋಕವನದಲಿ ವಿಶೋಕನಾಗಿ
ರಾಮನಾಮವನೆ ಜಪಿಸುತಿದೆ.

ಕಣ್ಣೀರ್ ಕಡಲಿಗೆ ಸೇತುವೆ ಕಟ್ಟಿ
ದಶಮುಖ ರಾವಣನನು ತುಳಿದಟ್ಟಿ
ಸೀತಾ–ರಾಮರು ಕೂಡುವರೋ?
ಒಬ್ಬರೊಬ್ಬರನು ನೋಡುವರೋ?

ಅದು ಏನೇ ಇರಲಿ!

ಮಾತಿನ ಮಲ್ಲರು ಯಾರೋ ಆರು
ಮೂಗರು ಏಕೋ ಬಲ್ಲವರಾರು ?

ಮೌನವ್ರತಕ್ಕೆ ದೀಕ್ಷಿತರಾಗಿ
ಮೌನರಂಗದಲಿ ಇಳಿದಿಹರು
ಮಾತಿನ ಪಲ್ಲವಿ ಉದುರಿಸಿ ಮೌನದಿ
ಬಿಳಿ ಸಂಪಿಗೆಯೊಲು ಮುಗುಳಿಹರು.

ಕಾಕತನವೆ ಹೊರ ಪೋ ಗೋ ಎಂದು
ಜನಮನ ತಾನ – ವಿನಾಯಕರು
ನಾನಿನ ಎದೆಯಲಿ ತಾನಿನ ಬೀಜವು
ಬಿತ್ತಲ ಎನುವ ವಿಧಾಯಕರು.

ನೆಂದವರೂ ಅರೆಬೆಂದವರೂ
ಆತ್ಮದತ್ತ ಹೊರಳಿರಲಿ ನೋಡಿ ಎಲ
ಸತ್ ಇದೆ ಸತ್ತಿಲ್ಲೆಂದವರು
ಸತ್ತ್ವದ ಸೊತ್ತಿಗೆ ಬಂದವರು

ಊಟ ಉಡಿಗೆಯಲಿ ವಿನೀತರು
ಓದುವಾದದಲಿ ಸುನೀತರು
ನಿದ್ರಿಸಲೆಲ್ಲರಿಗೊಂದೇ ಮಳಗಿ
ತಮ್ಮ ತಮ್ಮ ಮನ ತಾವೇ ಬೆಳಗಿ

ಬೆಳುಗಾವಿನ ಒಳಕುಲುಮೆಯಲಿ
ಆರೆ ಒಲುಮೆಯಲೀ—ಆರೆ ಒಲುಮೆಯಲೀ!
ಹಗಲಿರುಳೆನ್ನದೆ ಚಿಂತಿಸುತಿಹರು :
'ಕನ್ನಡ ನಾಡೇ' ಎಂದು
'ಎಲ್ಲಿದೆ ತಂತೆಮ್ಮೆಡೆ ?' ಎಂದು.

ಮೌನದ ಗೂಡಿನ ಹಕ್ಕಿಗಳು
ಮಾತಿನ ಬಯಲಿನ ಚುಕ್ಕೆಗಳು
ಇವರೆಲ್ಲರು ನರಸಿಂಹರು ಆಗಿ
ಗರ್ಜಿಸುವರು ಎಂದು
ಎಂದೋ ಎಂದು ಮೌನವು ಕಾದಿ
ನುಡಿ–ನಡೆ ಮೈಗೊಂಡು.

ಧಾರವಾಡದಾ ಸೀಮೆಯ ಸುತ್ತೂ
ತಗ್ಗಿ ಮೇಲಕುಕ್ಕಿ
ಮಾಳವೊರಡಿಯಲಿ ನಿಂತು ನೋಡುತಿದೆ
ಹಾಗೆಯೆ ಎಕ್ಕಿಕ್ಕಿ
ಮಿತ್ರರ ಕರುಣೆಯು ಕಾಯುತ್ತಿಹುದು
ಮನದನ್ನೆಯರೊಲವು
ಗುಲ್‌ಮೊಹೋರಿನಲಿ ಆರತಿ ಎತ್ತಿ
ಎದೆ ನಾಡಿನ ಚೆಲುವು
ಬಂಧು ಬಳಗವೂ ಬಿಂದು ಬಿಂದು ಒಂ-
ದಾಗಿ ಕೂಡುತಿಹುದು

ಒಳಗೆ ಹೊರಗೆ ಹರಿ ದೈವಕೃಪೆಯು ತಾ-
ಯಾಗಿ ನೋಡುತಿಹುದು.

ವಾಸುದೇವನೇ ಎಲ್ಲವು ಒಂದು ಹರಿಹರಿ ಹಿಗ್ಗುವರು
ಇಂಥವರಾರು ಹೇಳರಿ ಯಾರು ತಮತಮಗೊಗ್ಗುವರು ?

# ತಂಗಿ ಗೌರಮ್ಮ

ಜಲದೇವತೆ ವನದೇವತೆ ಒಡೆದೆಯುಲಿ ಸೇರಿ
ಬಿನದಿಸುತಿಹ ಹೊಳೆಮಡುವಿಗೆ ನೀನೀಸಲು ಹಾರಿ
ತಾಯೊಡಲನು ಕೂಸಾಟಕೆ ತಾಯ್ಮಡಿಲಿಗೆ ಬೀರಿ
ತೀರಲು, ಜಡವಾಗಳೆ ಕಾವೇರಿಯು ತಂಪೇರಿ ?
ನೆನೆದರೆಯೇ ನಾ ನಡುಗುವೆ ಇದು ಆದುದದೆಂತೋ ?
ಎಲ್ಲಿಂದೀ ಎಳೆಜೀವಕೆ ಸಾವೆಂಬುದು ಬಂತೋ ?
ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು
ಜಗ್ಗದೆ ನಿನ್ನನು ಮೇಲಕೆ ನೀ ಮುಳುಗಿದೆಯೆಂತು ?

ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳದೊ ಬಾನಂಚಿಗೆ ಕಾವೇರಿಯ ಕುವರಿ !
ಬೆಳುದಿಂಗಳೆ ಕರುವಿಟ್ಟಿತೊ ಈ ನಿರ್ಮಲಮೂರ್ತಿ
ಮೊದಲಲ್ಲಿಯೆ ಕುಡಿಬಿಟ್ಟಿತೊ ಮುಗುಳಿಟ್ಟಿತೊ ಕೀರ್ತಿ?
ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯು
ಬಾಳ್‌ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯು.

## ಇವರು ಆಲೂರವರು !

ತನ್ಮಯತೆಯಲ್ಲಿ ತಾಟಸ್ಥ್ಯವಿರುವೀ ಗುಟ್ಟು
ಇದು ಯಾ ಪುರಾತನದ ಮುನಿಯ ನೂತನ ಠೀವಿ
ಮೂಗನೇರಕೆ ನಿಲುಮೆ ನಿಲಿಸಿರುವ ನೀ ಜೀವಿ
ಇತಿಹಾಸ–ಮಧುರಾಣಿ ಕಟ್ಟಿರುವ ಈ ಪುಟ್ಟು ?

ಜಡೆಬೀಳಲವರು ಇವರಾರೊ ಎಂಬರೆ, ಮಂಕೆ !
ಕಲ್ಲೆದೆಯ ಸೀಳಿ ಎರಡಕ್ಷರವ ಕಂಡವರು
ಪ್ರಾಯದೆದೆಯಲಿ ಬಿತ್ತಿ ಆವರ ಬೆಳೆ ಉಂಡವರು
ಇವರು ಆಲೂರವರು ! ಏಕೆ ಬೇಕೀ ಶಂಕೆ ?

ಜೀವ ವೈಚಿತ್ರ್ಯಕೂ ಚಿತ್ರಿಕನ ಚಿತ್ರಕೂ
ಬಿಂಬಬ್ರೈಂಬಿಕ ಬಂಧಿ ಭಂದವೇನೋ ಇಹುದು
ಹಣೆಯ ಗೆರೆ, ಕೂದಲೆಳೆ, ಕಳಿತ ಕಳೆ, ಪಾತ್ರಕೂ
ಕಲೆಯ ಸೂತ್ರಾನುವರ್ತಿತ್ವದಂದವ ತಹದು.

ಇಗೊ ಬೇರು ಬಿಟ್ಟಿಹುದು ಇಲ್ಲಿ ಗತವೈಭವವು
ಕಣ್ಣಲ್ಲಿ ಮಾತ್ರ ನಾಟಿಹುದದ್ಭುತೋದ್ಭವವು.

## ಮನಸೂರ ಮಲ್ಲಿಕಾರ್ಜುನರ ಹಾಡು ಕೇಳಿ

ಗಾಂಧರ್ವ ಮಾಯೆಯೋ
ಕುಣಿದಿತಪ್ಸರೆಯಂತೆ.

ಮಿಂಚು ಬೇಲಿಗೆ ಬೆಳಗೆ
ಸ್ವಾತಿಯಾ ಹನಿಯಂತೆ.

ಕನ್ನಡದ ರಾಗವೇ
ಕಾವೋದೆಗೆದ್ದಂತೆ.

ಮಲ್ಲಿಕಾರ್ಜುನ ಶಿಖರ
ಮಲ್ಲಿಗೆಯೊಳಿದ್ದಂತೆ.

ಶಿವನ ತಾಂಡವ ಮುಗಿಯೆ
ಶಿವ ಲಾಸ್ಯಕಿದ್ದಂತೆ.

ಬಿಸಿಲ್ ಹಣ್ಣನುಂಡು ಚಂ-
ದ್ರನ ಜೇನು ಮೆದ್ದಂತೆ.

ಮನ ಸೂರೆಹೋಯಿತೋ
ಹೋ ! ಇದ್ದಕಿದ್ದಂತೆ.

ಈ ಗೀತ ಹಾಡಿದುದು
ಹೊಸ ಸ್ವಪ್ನ ಬಿದ್ದಂತೆ.

ಅಂತೆ, ಇಂತೆ ಎನ್ನುತ್ತ
ಮನಮೀರಿ ನಾನಿಂತೆ.

ಕಳಚಿ ಬಿದ್ದಿತು, ಗೆಳೆಯ
ಜಗದ ಸಂತೆಯ ಚಿಂತೆ.

## ಗೆಳೆಯನಿಗೆ ಹರಕೆ

ಹರಟೆಯಂದದ ರಗಟೆಯನು ಹೊತ್ತು ತಿರುಗುತಿರು-
ವಂಥ ತಿರುಮಂತ್ರ ನೀನು.
ತಿರುಗಣೆಯ ಮಡುವಿನಲಿ ತಿರತಿರುಗಹತ್ತಿರುವೆ
ಹೀಗೆ ಪರತಂತ್ರನೇನು ?

ಹುಡಿಯಂತೆ ಹಾರುವನೆ ದಾರಿ ತೋರಿದ ದಿಶೆಗೆ
ಚಿಕ್ಕಿಗಳ ವಂಶದವನು ?
ಕುಡಿಯನ್ನು ಕತ್ತಲೆಗೆ ಕುಡಿಯಗೊಡುವನೆ ಹೇಳು
ಪರಮಾತ್ಮನಂಶದವನು ?

* * *

ಗುರುದೇವ ನಿನ್ನ ಗುರಿ–ಗುರುದೇಹವಲ್ಲ ಅರಿ–
ಬಹಿರಂಗ ಮರೆಯ ಅರಿಯೈ.
ಆರಿವ ದೀವಿಗೆಯ ಕುರಿ, ಅತ್ತಕಡೆ ನೀನು ಹರಿ-
ಅವನಂತರಂಗ ತೆರೆಯೈ.

ಅರುಹಿನರುಹಂತ, ಬದ್ಧತೆಯಿರದ ಬದ್ಧ-ನೀ-
ನಾ ಭಾವದಲ್ಲಿ ನುರಿಯೈ.
ಗುರುತುಗಳ ಹಿರಿಗುರಿಯು, ಭೂತಭವ್ಯದ ದೊರೆಯು
ಆ ದೇವನಲ್ಲಿ ಬೆರೆಯೈ.

ಹಿರಿತನದ ಪರಿವೆಯನು ಮರೆತು ಮಲಗಿರುವಂಥ
ನಿನ್ನ ನಾಡನ್ನು ಕರೆಯೈ.
ದೊರೆತನದ ಗುರುದೀಕ್ಷೆಯನ್ನು ಕೊಟ್ಟಾಮೇಲೆ
ಅದರೊಡನೆ ನೀನು ಮೆರೆಯೈ.

ನಿನ್ನ ಲೇಖನಿಯಾಗಿ ನಿನ್ನ ಪೇಯುವದಾಗಿ
ನಿನ್ನ ಕರ ಮುಕುರವಾಗಿ
ನಿನ್ನ ತನು ತನುವಾಗಿ; ಕುಣಿವ ಸಾಲಿಗೆ, ನನ್ನಿ
ಗರೆವವಳಿಕಂಗಳಾಗಿ.

ನಿನ್ನ ಪ್ರೀತಿಯ ದೂತಿ, ನಿನ್ನ ಬೆಡಗಿನ ಗೆಳತಿ,
ತವ ಸ್ನೇಹಸಖಿಯುದಾಗಿ,
ನಿನ್ನ ಕರುಳಿನ ಕೆಳೆಯು, ನಿನ್ನ ಮಾತಿನ ಕಳೆಯು,
ತವ ಸಂಗಸುಖಿತನಾಗಿ.

ಭೋಗಿ ಜೀವವೆ ! ನಿನ್ನ ಹುರುಪುಳ್ಳ ಹುರಿಯುಳ್ಳ
ಪುರುಳುಳ್ಳ ಹರಟೆಯಾಗಿ.
ಸಾಗಿ ಸಂಗಡ ಬರುವೆ (ಯೋಗಿ ಜೋಗಿಯು ಆಗು)
ನಿನ್ನ ಕೈ ಪರಟೆಯಾಗಿ.

ನಿನ್ನ ಜೀವದ ದೊರೆಯು ನಿನ್ನ ಭಾವದ ಗುರಿಯು
ಸುಸ್ಫೂರ್ತಿ ಝರಿಯು ಆಗಿ.
ನಿನ್ನ ಕಾವ್ಯದ ತೊರೆಯು. ನಿನ್ನ ಕೀರ್ತಿಯ ಪರೆಯು
ಸ್ವಾನಂದ ಲಹರಿಯಾಗಿ.

ಪಡೆದ ತಾಯಿಯು ಆಗಿ, ಪಡೆದ ಮಡದಿಯುದಾಗಿ
ಜೀವದೊಡನಾಡಿಯಾಗಿ.
ಬಿಡದ ಗೆಳೆಯನು ಆಟವಾಡಲನುವಾಗಿಹೆನು
ಲೀಲಾವತಾರಿಯಾಗಿ.

* * *

ಗದ್ದರಿಸಿ ಗಂಡುದನಿಯಿಂದ ಚೇತರಿಸುವೆನು
ಬಿದ್ದಿರಲು ನಿನ್ನ ತನುವಾ.
ಮುದ್ದಿರಿಸಿ ಹೆಂಗರುಳಿನಂತರಳಹಚ್ಚುವೆನು
ಮುಗಿದಿರಲು ನಿನ್ನ ಮನವಾ.

ಭಾವ ದೇವಾಲಯದ ದೇವಿಯಾಗುತ ನಾ
ಹರಿಯಿಸುವೆ ಹರಣಗಳನು.
ಜೀವಜೀವಾಳಗಳ ದೇವಸಾಗುತ ನಾನು
ತೆರೆಯಿಸುವೆ ಕರಣಗಳನು.

ಮಿತ್ರನುಸುರಿಗೆ ಹಸಿದು 'ಆ'ಯೆಂದು ತೆರೆಯದಿಹ
ಹೃತ್ಕಮಲವಿರಲುಬಹುದೆ ?
ಚಿತ್ರ ಚೈತ್ರದ ಗಾಳಿಯುಂಡು ಮೌನವ ತಳೆವ
ಕೋಗಿಲೆಯು ಜಗದಲಿಹುದೆ ?

ಸ್ನೇಹಪೋಷಣೆಯಿಂದ ಯಾರ ಮನದೀಪಿಕೆಯು
ಬೆಳ್ ಬೆಳಗು ಬೆಳಗದಿರದು ?
ದೇಹದಾಸನು ಅದರ ಬೆಳಕಿನಲಿ ಮುಗಿಸಿದನು
ಈ ಹಾಡ ಹರಟೆ ಬರೆದು.

* * *

ಮನದ ನಂದನದಲ್ಲಿ ಬೆಳೆದ ಹೂಗಳದೊಂದು
ಮುತ್ತಿದೆನು ಹಾರವಿಂದು.
ಜನ ರೀತಿಯಂತೀಗ ಜಗದಲ್ಲಿ ಕಳುಹಿದೆನು
ಮಾತುಗಳ ಮಾಲೆಯೊಂದು.

# ಎಂದೂ ಅಗಲದ ಗೆಳೆಯನಿಗೆ

ಮುಗಿಲ ತುದಿದಿದ್ದರೂ ನನ್ನ ಬದಿಗಿರುವಂಥ
ವಿಶ್ವದಗಲದ ನನ್ನ ಗೆಳೆಯ ಕೇಳ್ಳಿ.
ಅಗಲಿಕೆಂಬುದು ಕಣ್ಣಮುಚ್ಚಣಿಕೆಯಾಟವ-
ಲ್ಲವೆ ? ಚೆನ್ನಮಲ್ಲ ! ಹೇಳ್ಳಿ.

ಒಡಲೆಂಬ ಒಡ್ಡಿನಿಂದಡ್ಡಗಟ್ಟಿಸಿಕೊಂಡ
ದಿವ್ಯ ಚೈತನ್ಯ ಘನ ಬಿಂದುವನ್ನು
ಒಡಗೂಡಿ ಒಡಮೂಡಿ 'ಅವನು' ಮಾಡಿಲ್ಲವೇ,
ಸಚ್ಚಿದಾನಂದಮಯ ಸಿಂಧುವನ್ನು ?

ಜನ್ಮವಗಲಿಸಲಾರದನ್ನು ಅಗಲಿಸಬಹುದೆ
ಹೊತ್ತುಗೊತ್ತಿನ ಕುತ್ತ ಅಡ್ಡಬಂದು ?
ಮನ್ಮನಕ್ಕೀಗಲೇ ಕಂಡು ಉಂಡದ್ದಾಯ್ತು
ಹಿಗ್ಗಿನಗಲಿಕೆ ಕೆಳೆಯ ನಿಕಷವೆಂದು.

ಇಂದಿನೀ ಗೆಳೆತನವು ಹಿಂದಿನಿಂದಲೆ ಬಂತು
ಮುಂದೆ ಜನ್ಮಾಂತರದಿ ಸಾಗಿ ಸಾಗಿ.
ಹೊಂದಿರುವ ಪಕಳೆಗಳ ಹಿಂದೆ ಕೇಸರದಿಂದ-
ನೇಕ ಬೀಜದ ಏಕ ಫಲವು ಆಗಿ.

ಕಂಗೊಳಿಸುವಂತೆ ನಡೆದಿಹುದು ಆಟವು ನೋಡು,
ಅಗಲಿ ಕೂಡುತ ಮತ್ತೆ ಕೂಡಿ ಅಗಲಿ.
ಜಂಗಮದ ಜಗುಲಿಯಲಿ ಹಿಗ್ಗು ಕುಣಿಯುತ್ತಲಿದೆ
ಕಣ್ಗೊನೆಯು ಹೊರಹೊರಗೆ ಅಳಲಿ–ನಗಲಿ.

# ರವೀಂದ್ರರಿಗೆ

ಭಾರತಭಾಗ್ಯವಿಧಾತಗೆ ಸ್ವಾಗತ
ಗೀತವ ಹಾಡಿದ ಕವಿಯೇ ;
ಕ್ರಾಂತದರ್ಶಿ ನಿತ್ಯೋದಿತ-ಕಿರಣನೆ
ಅಸ್ತವನರಿಯದ ರವಿಯೇ.

ಮುಕ್ತಜೀವನದ ಯುಕ್ತಿಯು ಕಲಿಸು, ವಿ-
ರಕ್ತನು ಎನಿಸಿದ ಕಲಿಯೇ ;
ಸ್ವರದ ಮೇಲೆ ಸ್ವರ ; ದನಿಯ ಮೇಲೆ ದನಿ
ಎತ್ತಿದೆ ನೀ ಜಗ ಒಲಿಯೆ.

ವೈರವನರಿಯದ ಸ್ವೈರವಿಹಂಗಮ
ಭೈರವಿ ಛಂದದಿ ಮುಗಿಸಿ
ಪ್ರೇಮಸೂತ್ರದಲೆ ಪಾತ್ರಗಳಾಡಿಸಿ
ಎಚ್ಚರಿಸಿದೆ ಸವಿ ನಗಿಸಿ.

ಮಾನವ ಹೃದಯದ ದಾನವ ಮಾಡುವ
ದೇವನದಾಗಲಿ ಆಟ.
ನಿನ್ನ ದರ್ಶನಕೆ ಕನ್ನಡಿಯಾಗಲಿ
ಕನ್ನಡ ನಾಡಿನ ನೋಟ

ಭರತನಾಟ್ಯವೇ ಭಾರತ-ಭೂಮಿಗೆ
ಎಂದಿಗು ಇದ್ದ ಬುನಾದಿ.
ಜೀವನ-ನಾಟಕ, ಸಾಕ್ಷಿಯೆ ಪ್ರೇಕ್ಷಕ,
ರಸ-ಬಾಳಿಗೆ ಇದು ಹಾದಿ.

ರಂಗಭೂಮಿಗಿದೊ ತಳಹದಿ ಈ ಕವಿ
ರವೀಂದ್ರ ಪ್ರತಿಭೆ–ಪ್ರತಿಜ್ಞೆ.
ರಸಸ್ಪರ್ಶಿ ಸದೋದಿತವು ಎನೆ
ನಟನಾಗಲಿ ನಮ್ಮಾ ಪ್ರಜ್ಞೆ.

# ತಮ್ಮ ನೆನೆವ !

ಕಲ್ಲು-ಕಾಗದ-ಕಡತಗಳಲಿ ಕಾಲನ ಕಾಲು
ಸಿಕ್ಕು ತೊಳಲಾಡುವಲಿ ಕುಣಿಕೆ ಬಿಡಿಸಿದಿರಣ್ಣ
ಕರುವನಾಡಿಸಿದಂತೆ ಅದನು ಕುಣಿಸಾಡಿದಿರಿ
ತಣಿದಿರಿ, ನೀವು ತಣಿಸಿದಿರಿ ಹನಿಸಿದ ಕಣ್ಣ.

ವೀರ ಚಿಂತಕ, ನಿಮ್ಮ ಧ್ಯಾನ ಬುದ್ಧಿಗೆ ಗಮ್ಯ
ನಿಮಗೆ ನೀವೇ ಪೂರ್ವಪಕ್ಷ ಅಕ್ಷರ-ರಮ್ಯ
ನಡುಹಾದಿಯಲ್ಲೆ ಬಿಡಬಹುದೆ ಜೋಗಿಯ ಕಂತೆ ?
ನಾವು ಬರಬಹುದು ಕನ್ನಡಕೆ ! ನೀವೂ ಅಂತೆ.

ಪೈಗೆ ಪೈ ಲೆಕ್ಕ ಒಪ್ಪಿಸಿದಿರಾ ? ಗೋವಿಂದ
ಒಪ್ಪಿದನೆ ? ನಾ ನೆನೆವೆ ಕಸ್ತೂರಿ ಜವ್ವಾದಿ
ಹೊರಗೆ ಹೊಗೆ ಬೂದಿ, ಒಳಗೊಳಗೆ ಅಗ್ನಿಯ ಹಾದಿ
ನಿಮ್ಮ ಜಿಜ್ಞಾಸೆಗೆಲ್ಲಿದೆ ಮುಗಿವು? ಪದಕಾದಿ?
ಹರಿಸಿದಿರಿ ತರುಣರನು ಆ ಅಸೂಯೆಯ ದಗ್ದ-
ಕಾಲಜ್ಞಾನಿ! ಮುಗ್ಧ ! ಅಕ್ಕರಿಗನೇ! ವಿದಗ್ಧ !

# ದೇವ್ರುಡು

ಬಾಲನಂಥ ದೇವ್ರುಡು । ಉನ್ಮತ್ತನಂಥ ದೇವ್ರುಡು
ಜಡ-ಪಿಶಾಚಿ ದೇವ್ರುಡು । ಹುಚ್ಚು ಮರುಳು ದೇವ್ರುಡು
ಜೀವನವೇ ನಾಟಕ । ತಾನೂ ಒಬ್ಬ ನೋಟಕ
ಆಟವೋ ಬೂಟಾಟವೋ ? । ನೋಟವೆಂದ ದೇವ್ರುಡು

ಎದ್ದ, ಬಿದ್ದ, ಒದ್ದಾಡಿದ । ಗುದ್ದಾಡಿದ ದೇವ್ರುಡು
ಸುತ್ತಾಡಿದ, ಲೆತ್ತಾಡಿದ । ಕಿತ್ತಾಡಿದ ದೇವ್ರುಡು
ಕುಂಟುಗಾಲಿನಿಂದ ಹೊರಟ । ವೈಕುಂಠಕೆ ದೇವ್ರುಡು
ಕುರುಗಣ್ಣಿನಿಂದ ಕಂಡ । ಕೈಲಾಸವ ದೇವ್ರುಡು

ವೇದ, ತೀರ್ಥ, ಬುಡ್ಡನಗಿರಿ । ಬಾಳಕದಳಿ ಕರೆವುದು
ಅರ್ಥಮರ್ಥ ಎಲ್ಲ ಕೆಲಸ । ಬರಬೇಕು ದೇವ್ರುಡು
ದೇವರನ್ನು ಮರೆಯದಂತೆ । ಗುರುವಿನಲ್ಲಿ ಬೆರೆಯುವಂತೆ
ವಿನಯದಲ್ಲಿ ಮರೆಯುವಂತೆ । ಬರಬೇಕು ದೇವ್ರುಡು

ಎಲ್ಲ ಕ್ಷೇಮ, ಎಲ್ಲ ಯೋಗ । ಇಂದ್ರಭೋಗ ದೇವ್ರುಡು
ಏನಕೇನ ಬರುವುದೇನೋ ? । ಮೇನಕಾಪತಿತ್ವವು
ಗಾಯತ್ರಿಯ ಗಾತ್ರವೆಲ್ಲಿ । ಶಕುಂತಲಾ ಸತೀತ್ವವು
ಭಿಕ್ಷಾಟನ ಚರಿತೆ ಉಂಟು । ಶಂಕರನಿಗು ರುದ್ರಗೂ
ವಿರಹಯೋಗ ವಿರಹಭೋಗ । ತಪ್ಪಲಿಲ್ಲ ಗೌರಿಗೂ
ಅವತರಣಕೆ ಉದ್ಧರಣಕೆ । ಸೋಪಾನವು ಜೀವನ
ಕ್ರೋಧ, ಶಾಪ, ದೇವತಾಪ । ಎಲ್ಲ ತಪವು ಪಾವನ
ಅರಿವುದೇನು ? ಮರೆವುದೇನು ? । ಲೀಲೆಗುಂಟು ಕಾಲವು
ಈಸಿಸುವುದು ಮುಳುಗಿಸುವುದು । ಅದು ಮಾಯಶಾಜಾಲವು
ನಹುಷ, ಯಾಜ್ಞವಲ್ಕ್ಯನಲ್ಲಿ । ಸುಮಿತ್ಪಾಣಿ ದೇವ್ರುಡು
ಬ್ರಹ್ಮ-ಕ್ಷತ್ರ ಕುರುಕ್ಷೇತ್ರ । ಅದು ಪವಿತ್ರ ದೇವ್ರುಡು

# ನಾನು ಕಂಡಂತೆ

ದತ್ತಗುರು ನೀಡಿದರು ಆ 'ವಿನಾಯಕ' ಭಿಕ್ಷೆ
'ಬಾರೊ ಬಾ' ಎಂದು ಹೃದಯದ ಗುಹೆಯು ತೆರೆದಾಗ
ಸಹಜೀವನಕೆ ಮೈತ್ರಿ ಸೂತ್ರ ತೆರೆ ತೆರೆದಾಗ
ತನ್ನ ತಾ ಮೀರುವುದು ವಿಜ್ಞಾನದಾ ದೀಕ್ಷೆ.

ಐದು ಖಂಡಗಳಲ್ಲಿ ಅಲೆದಾಡಿಸಿದ ಕೀರ್ತಿ
ಈ ವ್ಯಕ್ತಿ ಈ ಭಕ್ತಿ ಇದಕೆ ಇದುವೇ ಸಾಟಿ
ಸಾಹಸಕೆ ಹಿಂಜರಿವುದಲ್ಲ ವೇಗದ ಥಾಟಿ
ಕಂಡರಿಸುತಿದೆ ದೃಷ್ಟ ತನ್ನದೃಷ್ಟದ ಮೂರ್ತಿ.

ನವಖಂಡ ಭಾರತೀಯತ್ವದಾ ಉದಯಘನ
ಭಾಷೆ ಹತ್ತಾದರೂ ಐಕ್ಯಲಿಂಗದ ಭಾವ
ವಾದ್ಯಗಳ ಮೇಳದಲಿ ಏಕತಾನದ ಜೀವ
ಕವಿವಿಹಂಗಮ ಸಂಘ ಕಂಡಿದೆ ವಿನಾಯಕನ
ನಾನು ಕಂಡಂತೆ : 'ಕಂಡಿಲ್ಲಾ' ಇನ್ನೂ ಪೂರಾ
ಇವನರಿವು ಇವನ ಗುರು, ಗುರಿಯೊ ಬಲು ದೂರಾ.

# ಪ್ರೀತಿ

ಪ್ರೀತಿ ಎಂಬ ಮಾತ ಕೇಳಿ
ರೆಕ್ಕೆಗೊಂಡು ಹಾರಿತು,
ರೆಕ್ಕೆಗೊಂಡು ಸಾರಿ ಜೀವ
ಕೈಲಾಸಕೇರಿತು-

ಭೂತಗಣದ ಮೇಳದಲ್ಲಿ
ಮಹಾ ಕಾಳದಾಳದಲ್ಲಿ
ಸತಿಪತಿಯರ ಜೋಡಿಯೊಂದು
ಕುಣಿಯುವದನು ಕಂಡಿತು ;
ಬೂದಿಬಡಕ ಗಂಡಿನಲ್ಲಿ
ಬಳ್ಳಿಯಂಥ ಮಳ್ಳ ಹೆಣ್ಣು
ನವರಸವನ್ನುಂಡಿತು :
ತಬ್ಬಿ ಉಬ್ಬಿ ಕೆಲೆದು ನೆಗೆದು
ಗಂಡ ಕೆಡಹಿ ಕುಣಿದಿತು,
ತುಳಿದು ತುಳಿದು ದಣಿದಿತು :

* * *

ಏನು ಕಂಡೆ ಎಂದು ಕಣ್ಣು
ತಾನೆ ಮುಚ್ಚಿಕೊಂಡಿತು
ಪ್ರೀತಿಯು ಕಣ್ಣಾರೆ ಕಂಡು
ಮನವು ಬೆಚ್ಚಿ ಬೆದರಿತು
ಮೈಯೆಲ್ಲ ಅದುರಿತು ;

ಹೆ, "ಪ್ರೀತಿ ಪ್ರೇತ
ಮಹಾಭೂತ !"
ಭೀತಿಯಿಂದ ಚೀರಿತು,
ಹಾಗೆ ನೆಲಕೆ ಜಾರಿತು.

# ಕುಣಿಯೋಣು ಬಾರs !

(ಒಂದು ನಲ್ವಾಡು)

ಕುಣಿಯೋಣು ಬಾರs
　　ಕುಣಿಯೋಣು ಬಾ　　　　॥ ಪಲ್ಲ ॥

(೧)

ಆಕಾಗಿ
　　ಯಾಕಾಗಿ
　　　　ಕುಣಿಯೋದು ಬೇಕಾಗಿ
　　　　　　ಇಲ್ದ ಬಣ್ಣದ ಸೋಗಿ । ಕುಣಿ....

ಹಿಗ್ಗಿ ಹಾಕಿತು ಕ್ಯಾಕಿ
　　ಇರಲಾರೆನೇಕಾಕಿ
　　　　ಬಾ, ಬಾರs ನನ್ನಾಕಿ । ಕುಣಿ....

(೨)

ಕೊಡೀಕಿ
　　ಹೊಡೀಕಿ
　　　　ಮುಪ್ಪತ್ತ ದೂಡೀಕಿ
　　　　　　ಹಣ ಬಾಕಿ ಹೆಣ ಬಾಕಿ । ಕುಣಿ...

ಏಸೊಂದು ಎಣಿಸ್ಯಾಟ
　　ಕಾಸಿನ ಕುಣಿಸ್ಯಾಟ
　　　　ಸಾಕಾತು ಸೆಣಸ್ಯಾಟ । ಕುಣಿ....

(೩)

ಕೀಸರು
　　ಬಾಸರು
　　　　ಇಟ್ಟರು ನಿಟ್ಟುಸುರು
　　　　　　ಕುಣಿತಾನs ಆಸರು । ಕುಣಿ....



ಕುಣಿಯೋಣು ಬಾರಾ, ಕುಣಿಯೋಣು ಬಾ.

—'ಕುಣಿಯೋಣು ಬಾರಾ!'

ಹರಿದರು ನೆತ್ತರು
ಉಳ್ಳವರು ಸತ್ತರು
ಒಳ್ಳೆವರು ಅತ್ತರು । ಕುಣಿ....

(೪)

ತೀರದ
ತೋರದ
ಹಾಳು ಸಂಸಾರ್ ಅದ
ಮೀರದ ಭಾರ್ ಅದ । ಕುಣಿ....

ಬಿಸಿ ದುಃಖದರಿವ್ಯಾಕ
ಹುಸಿ ಸುಖದ ಪರಿವ್ಯಾಕ
ನಕ್ಕಽಸುನೂ ಬೇಕ । ಕುಣಿ....

(೫)

ತಿಣಿಕಿಣಿಕಿ
ಇಣಿಕಿಣಿಕಿ
ಒಳಹೊರಗ ಹಣಿಕಿಣಿಕಿ
ಸಾಕಾತು ಸುಳ್ಳೆಣಿಕಿ । ಕುಣಿ...

ಈ ಬದುಕು ಬರಿ ಭ್ರಮಿ
ತಿಕಿದಿಮಿ ಗಿಮಿಗಿಮಿ
ಹಾಂಗೊಮ್ಮಿ ಹೀಂಗೊಮ್ಮಿ । ಕುಣಿ...

(೬)

ಅಂತಿರಲಿ
ಇಂತಿರಲಿ
ನಿಂತಲ್ಲಿ ನಿಂತಿರಲಿ
ಸಂತೆಯು ಚಿಂತಿರಲಿ । ಕುಣಿ...

ಕಣ್ ಒಳಗ ಹೊರಳೀಸಿ
ಎದೆಮುಗುಳನರಳೀಸಿ
ಹೂನೀರನುರುಳೀಸಿ । ಕುಣಿ...

(೭)

ನಾನಲ್ಲ
ನೀನಲ್ಲ
ನನ್ನಲ್ಲಿ ನೀನಿಲ್ಲ
ಸಾವಿಲ್ಲ ನೋವಿಲ್ಲ । ಕುಣಿ....
ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ । ಕುಣಿ...

(೮)

ಕೋಲ್ಯಾಕ
ಸಾಲ್ಯಾಕ
ಕಲಿಕಿಯ ಕಾಲ್ಯಾಕ
ಹಿಗ್ಗಿಲೆ ನಡಿ ಸಾಕ । ಕುಣಿ...
ಘಾಳೇನು ತೀಡ್ಯಾವು
ನಮ್ಹಾಂಗ ಆಡ್ಯಾವು
ಈ ಕುಣಿತ ಬೇಡ್ಯಾವು । ಕುಣಿ...

(೯)

ತಾಳ್ಯಾಕ
ತಂತ್ಯಾಕ
ರಾಗದ ಚಿಂತ್ಯಾಕ
ಹೆಜ್ಜ್ಯಾಕ ಗೆಜ್ಜ್ಯಾಕ । ಕುಣಿ...
ಕುಲುಕಿಸಿ ಕೈ ಕೈ
ಮುಲಕಿಸಿ ಮೈ ಮೈ
ಥಕ ಥಕ ಥೈ ಥೈ । ಕುಣಿ...

(೧೦)

ಸೆರಗಿಲ್ದ
ಬೆರಗಿಲ್ದ
ಹೆದರೀಕಿ ಹೊರಗಿಲ್ದ
ಮುಲಗಿಲ್ದ ಕೊರಗಿಲ್ದ । ಕುಣಿ...

ನಾಚೀಗಿ-ಗೀಚೀಗಿ
ಕಳೆದೊಗೆದಾಚೀಗಿ
ಬೀಸಾಗಿ ಈಚೀಗಿ । ಕುಣಿ...

(೧೧)

ಕಾಗುಣಿತ
ಬರಿಗಣಿತ
ಯಾಕ ಡೊಂಬರ ಮಣಿತ
ಸುಗ್ಗಿಯು ಸಿರಿಕುಣಿತ । ಕುಣಿ....

ತರಗೆಲಿ ಚಿಗಿಧಾಂಗ
ಚಿಗುರೆಲಿ ಚಿಗಿತ್ಹಾಂಗ
ನನಿಕೊನೆ ಮುಗಿಧಾಂಗ । ಕುಣಿ....

(೧೨)

ಚಕಚಕ
ಚಂಚಲ
ಮಿಂಚಿನ ಗೊಂಚಲ
ಚಕಮಕಿ ಚಲಮಲ । ಕುಣಿ....

ಹೊಂಗ್ಯಾದಿಗಿ ಹೊಡಿ
ಮುಡಿನಾಗರ ಹೆಡಿ
ಹಾಂಗೊಮ್ಮೆ ತೂಗಾಡಿ । ಕುಣಿ...

(೧೩)

ಕುಡಿಗಣ್ಣು
ನಗೆಗಣ್ಣು
ಚುಚ್ಚೋಣು ಬಿಚ್ಚೋಣು
ತೇಲ್ಗಣ್ಣು ಮುಚ್ಚೋಣು । ಕುಣಿ...

ಕಣಕಣ್ಣ ಹೆಣೆಯೋಣು
ಸೆಳೆದತ್ತ ಮಣೆಯೋಣು ।
ಮೈಮರಿಯೆ ದಣಿಯೋಣು । ಕುಣಿ...

(೧೪)

ಚಿಗರ್‍ಯಾಗಿ
ತಿಗರ್‍ಯಾಗಿ
ನಿದ್ದೀಯು ಭಗರ್‍ಯಾಗಿ
ಗಾಳೀಗು ಹಗುರಾಗಿ । ಕುಣಿ....
ಕೈ ಮೈ ಬೀಸಾಡಿ
ಇಳಿಗೂದಲೀಸಾಡಿ
ಬೆವರ್‍ಹನಿ ಸೂಸಾಡಿ । ಕುಣಿ...

(೧೫)

ಗರಿಗರಿ
ಗಿರಿಗಿರಿ
ಹಿಗ್ಗಿಹಿಗ್ಗಿ ಹಿರಿಹಿರಿ
ಸೈ ಸೈ ಸರಿಸರಿ । ಕುಣಿ...
ಗುಡ್ಡಾ ತಲೆದೂಗಲಿ
ಹೊಳೆಹಳ್ಳಾ ನೂಗಲಿ
ದರಿಕೊಳ್ಳಾ ಕೂಗಲಿ । ಕುಣಿ...

(೧೬)

ನೆಲದೊಡಲು
ಕುಣಿಯಲು
ಕುಣಿಕುಣಿದಿತು ಕಡಲು
ಮಿಡಿದಿತು ಸಿಡಿಸಿಡಿಲು । ಕುಣಿ...
ಹಗಲಿರುಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ । ಕುಣಿ...

(೧೭)

ಹುಲ್ಲೆಲಾ
ಸ್ಥಿರಜಲಾ
ಚಿಕ್ಕೆಲ್ಲಾ ಮುಗಿಲೆಲ್ಲಾ
ಕುಣಿತಿಲ್ದ ಜಗ ಇಲ್ಲಾ । ಕುಣಿ....

ಕುಣಿತಕ್ಕ ಇತಿ ಇಲ್ಲ
ಕುಣಿತಕ್ಕ ಮಿತಿ ಇಲ್ಲ
ಬೇರೊಂದು ಗತಿ ಇಲ್ಲ । ಕುಣಿ....

(೧೮)

ಅಂಗಲು
ಅಂಗಲು
ಚಿಕಿಚಿಕ್ಕಿ ತಿಂಗಳು
ಉಸಿರಾಸೆ ಹಿಂಗಲು । ಕುಣಿ...

ನೆಲ ಮುಗಿಲನಪ್ಪಿತು
ಚೆಲುವಾಗಿ ಒಪ್ಪಿತು
ಸಾವೊಮ್ಮೆ ತಪ್ಪಿತು । ಕುಣಿ...

(೧೯)

ಆ ಕ್ಷೀರ-
ಸಾಗರ-
ದಾನಂದದಾಗರ
ತೆರಿ ತೆರಿ ತೆರದರ । ಕುಣಿ....

ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ । ಕುಣಿ...

# ಸಂಸಾರ

ಹುಡುಕ್ಯಾನ ಹಿಗ್ಗಿನಾ ದಾರಿ, ಹುಡುಗ ಸುಖದುಃಖ ಸಾಗರಾ ಸೇರಿ
ಮದುವೀಯ ಹಡಗವನ್ನೇರಿ
ಹುಡುಕ್ಯಾನ ಹಿಗ್ಗಿನದಾರಿ ॥ ಪಲ್ಲ ॥

ಪೌರಾಣಿಕ :

"ಛೀಮಾರಿ ಪುರಾಣದ ಕಥೀ ಏನು ಸತಿಪತಿಗೆ ಸುಗ್ಗಿದಾ ಗತಿ
'ಸುಟ್ಟು ಬೂದಿ ಕಾಮ' ಅಂತ ಕೇಳಿ
ಅಳತ ಆದ ಗಾಳಿ
ಸುಗ್ಗಿಯೆದೆ ಸೀಳಿ
ನಾ ನಿನಗ ಕಾಮನ ಮೂರ್ತಿ ನೀನು ನನ ಪೂರ್ತಿ ರತಿಯೇ ಸತಿ
ಛೀಮಾರಿ ಪುರಾಣದ ಕಥಿ" ೧

ಕಾವ್ಯ ರಸಿಕ :

"ಏನೈತಿ ಸುಗ್ಗಿಯಾ ಹುರುಡ–ಯಾಕ ಉಳಿದೆಲ್ಲ ತಿಂಗಳಾ ಬರಡs
ಬೇಕ್ಯಾಕ ಮಾವಿನ ಕಾಡು
ಕೋಗಿಲದ ಹಾಡು
ಅಗಲಿಕಿ ಕೇಡು
ನಿನ ತೆಕ್ಕಿಯೊಳಗ ಸಿಕ್ಕೈತಿ ಸುಗ್ಗಿ ಸ್ವರ್ಗಕ್ಕ ಸಾಕು ತೋಳೆರಡs
ಏನೈತಿ ಸುಗ್ಗಿಯಾ ಹುರುಡ?" ೨

ವ್ರತಿ :

"ನಿನ ಸ್ಪರ್ಶ ಹರ್ಷದಾ ಚಿಲುಮಿ–ಅಲ್ಲಿ ನೀರಾಟವಾಡತದ ಒಲುಮಿ
ನೀನಂತಿಯಂತ ನಾ ನೀರ
ನೀನ ಆಹಾರ
ಮಂತ್ರ ನನ ನೀರ
ಗಾಳಿಗೆ ಬೇರೆ ಮೈಸೋಂಕಿ ಹೊತ್ತಿತs ಬೆಂಕಿ ಕಮ್ಮರನ ಕುಲುಮಿ
ನಿನ ಸ್ಪರ್ಶ ಹರ್ಷದಾ ಚಿಲುಮಿ." ೩

ಕೌಟುಂಬಿಕ :

"ಮಕ್ಕಳ ಮಾಣಿಕದ ಕಣಿ ಸಿಕ್ಕಿ ನೀ ಚೊಕ್ಕ ಚಿಂತಾಮಣಿ
ಮಾತೆಲ್ಲ ಮುತ್ತಿನ ಎಳಿ
ಜೇನಿನ ಥಳಿ
ಹಿಗ್ಗಿನ ತೊಳಿ
ಮುಂಗಯ್ಯ ಮ್ಯಾಲೆ ಮುದ್ದುಂಡು ಬೀರತಾವ ಮುದ್ದುಮಾತಿನ ಗಿಣಿ
ಮಕ್ಕಳ ಮಾಣಿಕದ ಕಣಿ" ೪

ಕನಸಿಗ :

"ನಾ ಕಂಡ ಬೆಳಕಿನ ಹಣ್ಣ ನೀನು ನೀನಲ್ಲ ಚಿತ್ರದ ಹೆಣ್ಣ
ನನಗ್ಯಾಕ ಹುಬ್ಬಿನ ಡೊಂಕ
ಎದಿಗಳ ಬಿಂಕ
ಕಣ್ಣುಗಳ ಸುಂಕ
ನನ ಚಿತ್ತದಾಗಿನ ಚಿತ್ರಗಾರ ಬರೆದಾನ ಚಿತ್ತಕ ಕಣ್ಣ
ನಾ ಕಂಡ ಬೆಳಕಿನ ಹಣ್ಣ" ೫

ಮುಗಿತಾಯ :

ನೆರಿತಽದ ಚಿಕ್ಕಿಗಳ ಜಾತ್ರಿ ಮುಗಿಲಿನ್ಯಾಗ ದಿನದ ದೇವರ ಯಾತ್ರಿ
ಮನಿಮನಿಗೆ ಜೋಡಿಯು ಬೆಟ್ಟಿ
ಮೈಯಬು ಮನಮುಟ್ಟಿ
ಜೇನಹುಟ್ಟಿ ಕಟ್ಟಿ
ಅಮೃತಂತ ಬಾಯಿ ಚಪ್ಪರಸತಾವ ಕೇಳಿ ಕಣ್ಣ ಮಿಟಕತದ ರಾತ್ರಿ
ನೆರಿತಽದ ಚಿಕ್ಕಿಗಳ ಜಾತ್ರಿ ೬

# ನಾದಲೀಲೆ

ಕೋಲು ಸಖೀ, ಚಂದ್ರಮುಖೀ, ಕೋಲೆ ನಾದಲೀಲೆ ॥ ಪ ॥

ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ
ತರಳ ಎರಳೆ, ಚಿಗುರ ಚಿಗುರೆ, ಹೂವು ಹೂವು ಹುಲ್ಲೆ,
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಅತ್ತಣಿಂದ ಬೇಟೆಗಾರ ಬರುವ ನಾನು ಒಲ್ಲೆ.
ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ
ಕೋಲು ಸಖೀ……

ಬೀರುತಿರುವ ಪ್ರಾಣವಾಯು ಹೀರುತಿಹವೆ ನೀರೆ
ಕರೆವ ಕರುವು, ಕುಣಿವ ಮಣಕ, ತೊರೆವ ಗೋಗಭೀರೆ,
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಕಾಣೆ ಕೊಳಲಿನವನ ಎನುವೆ, ಎಲ್ಲು ಇಹನು ಬಾರೆ,
ಬೀರುತಿರುವ ಪ್ರಾಣವಾಯು ಹೀರುತಿಹವೆ ನೀರೆ
ಕೋಲು ಸಖೀ……..

ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ; ಬಾಲೆ
ಮುಕುಲ. ಅಲರು, ಮಲರು, ಪಸರ ಕಂಡು ಕಣ್ಣು ಸೋಲೆ
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಕಾದಲನೆಡೆ ಬೇಡ ಬಹಳು ಕಾದಲೆ ಹೂಮಾಲೆ
ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ; ಬಾಲೆ
ಕೋಲು ಸಖೀ……

ಬೇಟೆಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ.
ಮುಗಿಲ ಬಾಯ ಗಾಳಿಕೊಳಲ ಬೆಳಕಹಾಡ ಬೀರಿ
(ಕಂಗೊಳಿಸುವ ಕೆಂಪು ಇರಲಿ, ಕಂಗೆಡಿಸುವ ಮಂಜು ಬರಲಿ)
ಕಳೆಯಲಿಲ್ಲೆ ಕತ್ತಲಂಥ ಕತ್ತಲವೇ ಜಾರಿ.
ಬೇಟೆಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ.
ಕೋಲು ಸಖೀ……..

# ಏಳು ಕನ್ನಿಕೆಯರು

ನಿದ್ದೆಗಡಲಿನಲ್ಲಿ ನಾನು
ಎದ್ದೇಳುತಲಿದ್ದೆನಾಗ
ಏಳು ಕನ್ನಿಕೆಯರು ಬಂದು
ಏಳು ಎಂದು ಎಂದರೋ-ಏಳು ಎಂದು ಎಂದರು.

ನಿಂತೆ ನಡುವೆ ಗೊಮ್ಮಟನೊಲು,
ನಿಂತರವರು ಒರಗಿ ಸುತ್ತು
ದೀಪಮಾಲೆ ಕಂಬದಲ್ಲಿ
ದೀಪದ ಕುಡಿ ಕುಡಿಯೊಲೋ–ದೀಪದ ಕುಡಿ ಕುಡಿಯೊಲು

ಅಡಿಮುಡಿಗಳ ತುಟಿಕಟಿಗಳ
ಮಿಡಿದು ಹಿಡಿದು ನೋಡುತಿರಲು
ಮರ್ಮ ಕೆಣಕಿ ನೋಡಿದಂತೆ
ಕರ್ಮ ಕುದಿಗೆ ಬಂದಿತೋ-ಕರ್ಮ ಕುದಿಗೆ ಬಂದಿತು

ಕಲ್ಲು, ಗೊಂಬೆ, ಕೂಸುಗಳನು
ಎಲ್ಲ ನಂಬಿ, ನೆನೆದುಕೊಂಡೆ
ತಳವು ಕಾದ ಬೆಣ್ಣೆಯಂತೆ-
ಒಳಗೆ ಪ್ರಾಣ ಕರಗಿತೋ- ಒಳಗೆ ಪ್ರಾಣ ಕರಗಿತು

ನಡುಕ ಮಿಡುಕು ತೋರಗೊಡದೆ
ಅಡಕದಿಂದ ನಿಂತೆ ತಪಕೆ
ಗೆದ್ದೆನೇನೊ ಎನ್ನುವಂತೆ
ಇದ್ದೆನೊಮ್ಮೆ ಮನದೊಳೋ–ಇದ್ದೆನೊಮ್ಮೆ ಮನದೊಳು

ಬೊಟ್ಟು ನೀರು ಬಿಡದ ಹಾಗೆ
ಬಟ್ಟೆಯಂತೆ ಹಿಂಡುತಿರಲು
ತೊಡೆಯ ಮಿಂಟ ಬಿಟ್ಟಳಾಗ
ಕಡೆಗೆ ಅವರೊಳೊಬ್ಬಳೋ–ಕಡೆಗೆ ಅವರೊಳೊಬ್ಬಳು

ಅಯ್ಯೊ ಎಂದು ತಿಳಿಯದಾಗಿ
ಮೈಯೆ ಬಾಯಿಬಿಟ್ಟ ಹಾಗೆ
ಬೆವರು ಬಂದ ಮೈಯು ತುಂಬ
ನವಿರು ಮುಳ್ಳು ನಿಂತಿತೊ–ನವಿರು ಮುಳ್ಳು ನಿಂತಿತು

ಸ್ವರಕ್ಕೆ ಸ್ವರವು ಕೂಡಿಕೊಂಡು
ಹರಕೆ ಬರುತಲಿತ್ತು, ಹಾಡಿ
ಡೊಳ್ಳುಬಿದ್ದ ತಂತಿಯಿಂದ
ಜೊಳ್ಳುನಾದವೆದ್ದಿತೊ–ಜೊಳ್ಳುನಾದವೆದ್ದಿತು

ಬೆಳಕಿನ ಕುಡಿ ಆರುವಂತೆ
ಚಳಕವ ಕನ್ಯೆಯರು ಹಾರೆ,
ಹೇಡಿಮಣ್ಣ ಕಂಬದಂದೆ
ಗಾಡಿಯಳಿದು ಬಿದ್ದನೊ-ಗಾಡಿಯಳಿದು ಬಿದ್ದನು

ಏಳು ಕನ್ನಿಕೆಯರು ಬಂದು
ಬೀಳು ಎಂದು ಎನ್ನಲಿಲ್ಲ,
ಸ್ಪರ್ಶಸ್ಪರ್ಶದಿಂದ ಮಾತ್ರ
ಹರ್ಷ ಹೆಪ್ಪು ಹೊಂದಿತೋ–ಹರ್ಷ ಹೆಪ್ಪು ಹೊಂದಿತು

ರಸವು ವಿರಸವಾಯಿತಂದು
ಹೊಸ ಸಮರಸ ಕೂಡಿದಾಗ
ಏಳು ಕನ್ನಿಕೆಯರೆ, ಬಂದು
ಆಳ ಮುಳುಗಿ ನೋಡಿರೇ-ಆಳ ಮುಳುಗಿ ನೋಡಿರಿ.

## ಸಚ್ಚಿದಾನಂದ

ಸಚ್ಚಿದಾನಂದ, ಸಚ್ಚಿದಾನಂದ, ಸಚ್ಚಿದಾನಂದ, ಸಚ್ಚಿದಾನಂದೋಂ।
ಸಚ್ಚಿದಾನಂದ ॥ ಪ ॥

ಸತಿ: ಬಾ, ಹಾಕು ರಿಂಗಣಾ ಗಗನದಂಗಣದಾsಗs
ನನ್ನ ಕಾಲಾಗ॥

ಒಳಗೊಳಗೆ ಕುದಿವ ಭೂಕಂಪ
ಹೊರಗ ಹಸಿತಂಪ
ಮೇಲೆ ನರುಗಂಪೋ। ಮೇಲೆ ನರುಗಂಪು
ಒಂತೆಲ್ಲ ನೆಲದ ಬಸಿರಿಂದ। ಮನೆಯು ನೆಲದಿಂದ। ಅನ್ನ ಮಣ್ಣಿಂದ।
ಮೈಯು-
ಅದರಿಂದೋಂ–ಸಚ್ಚಿದಾನಂದ।

ಬಾ, ಹಾಕು ರಿಂಗಣಾ ಗಗನದಂಗಣsದಾsಗs
ನನ್ನ ಕಾಲಾಗ॥
ನಾ ತೊಟ್ಟ ದೇಹಗಳ ಲೆಕ್ಕ, ಇಡುವರs ಸೊಕ್ಕ।
ಯಮಾ ನೋಡಿ ನಕ್ಕ॥

ಚೌರ್‍ಯೈಂಶಿ ಲಕ್ಷದಾ ಸಿಡಿಲು
ಹಿಡಿಯಲೀ ಒಡಲು
ಮುಗಿಲಿನ್ಹಾಂಗ ಸುಡಲೋ। ಮುಗಿಲಿನ್ಹಾಂಗ ಸುಡಲು
ನಿನ್ನುಸಿರು ಕಟ್ಟಿದೀ ಬಂಧ। ಐದರ ಸಂದ। ಕೆಡಲು ಏಳೊಂದ। ಕುಣಿತ–
ಸ್ವಚ್ಛಂದೋಂ- ಸಚ್ಚಿದಾನಂದ।

ನಾ ತೊಟ್ಟ ದೇಹಗಳ ಲೆಕ್ಕ, ಇಡುವರs ಸೊಕ್ಕ।
ಯಮಾ ನೋಡಿ ನಕ್ಕ॥
ಸಿಗಲೊಲ್ಲಿ ಬೇಕು ನೀ ನನಗ ಜೀವ ಜೀವಾsಳಾs।
ರಾಜಘನನೀಳಾ॥

ನನ ಒಡಪ ಒಡೆದವ ಯಾವಾ
ನೋವೆ ನನ ಜೀವಾ
ಈಗಿನೀ ಭಾವಾ। ಈಗಿನೀ ಭಾವಾ।
ಹಗಲಿರುಳು ಸೋಮರವಿ ಬಂದ। ಅರವು ಮರವಿಂದ। ಮನದ ಮಕರಂದ।
ಸುರಿವ ಅರವಿಂದೋಂ–ಸಚ್ಚಿದಾನಂದ।

ಸಿಗಲೊಲ್ಲಿ ಬೇಕು ನೀ ನನಗೆ ಜೀವ ಜೀವಾsಳ್ಯಾ

ರಾಜಘನನೀಳಾ॥

ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀsಪ್ಯಾ

ಬಾ ಸಮೀಪಾ॥

ಇದು ಯಾವ ಸೀಮೆಯಾ ಚದುರಾ।

ನಿಂತಿ ನನ್ನಿದುರು।

ಬಿಟ್ಟ ನಿನ ನದರೋ। ಭಿಟ್ಟ ನಿನ ನದರು।

ಇಡು ಬೆಳಕ ಕಾಣಿಕಿ ತಂದ। ಇಟ್ಟ ನನ ಮುಂದ। ಚೆಂದ ಬಿಸವಂದ।

ಮಾಡಿಸೋ ದುಂದೋsಂ-ಸಚ್ಚಿದಾನಂದ।

ಸುತೆಲ್ಲ ಕತ್ತಲಾ ಒಳಗ ಬೆಳಗತದ ದೀsಪ್ಯಾ।

ಬಾ ಸಮೀಪಾ॥

ಪತಿ:

ಇಷ್ಟ್ಯಾಕ ಹಲಬತೀ ಬಾಲಿ, ಬಂದೆ ಮೀನಾsಕ್ಷಿs।

ಪ್ರಾಣವೇ ಸಾಕ್ಷಿ॥

ನೀ ಕೂತಿ, ಬೆಂಕಿಯನು ನಂಬಿ

ಪ್ರೀತಿಯದಕೆಂಬಿ

ಕಪ್ಪುರದ ಗೊಂಬಿ। ಕಪ್ಪುರದ ಗೊಂಬಿ।

ಚಂದ್ರಾಮರಾಯ ಬಲುಚಂದ। ಒಗಟದಾಗ ಅಂದ। ಕಟ್ಟ ಒನಪಿಂದ।

ತಾಳಿಯೂ ನಂದೋಂ ಸಚ್ಚಿದಾನಂದ।

ಇಷ್ಟ್ಯಾಕ ಹಲಬತೀ ಬಾಲಿ, ಬಂದೆ ಮೀನಾಕ್ಷಿ।

ಪ್ರಾಣವೇ ಸಾಕ್ಷಿ॥

ಎಲ್ಲೆಲ್ಲು ಬೆಳಕು ಇರಲಾಕ ಅಳುತಿ ನೀ ಹಾsಡಿs

ಒಡಲ ಮರಿಮಾಡಿ॥

ನೀ ನನ್ನ ಶಕ್ತಿ ನಾ ಭಕ್ತಿ

ತೆರೆಯಿತs ಶುಕ್ತಿ

ಬೇರೆಯಿಲ್ಲ ಮುಕ್ತೀ। ಬೇರೆಯಿಲ್ಲ ಮುಕ್ತಿ।

ನಿನ ನಲ್ಲ ಎಲ್ಲಾರಾಗ ಒಂದ। ಒಂದ ನೂರೊಂದ। ಇದರ ಸವಿ ಮುಂದ।

ತೋರುವರವಿಂದೋಂ–ಸಚ್ಚಿದಾನಂದ।

ಎಲ್ಲೆಲ್ಲು ಬೆಳಕು ಇರಲಾಕ ಅಳುತೀ ನೀ ಹಾಡಿ

ಒಡಲ ಮರಿಮಾಡಿ।

ಒಳಹೊರಗೂ ಬೆಳಕು ನಾನಿರಲು ನಿನ ಹಣತಿs।
ಬಾರ ನನ ಗೆಣತಿ॥
ತೆರೆತೆರೀ ನಿನ್ನ ಎದಿಕದಾ
ಬಂದಿತ ಹದಾ
ಕೇಳ ಈ ಪದಾ। ಕೇಳ ಈ ಪ್ವದಾ।
ಗುರುದತ್ತ ಸಚ್ಚಿದಾನಂದ ಸಚ್ಚಿದಾನಂದ ಸಚ್ಚಿದಾನಂದ
–ಸಚ್ಚಿದಾನಂದೋಂ। ಸಚ್ಚಿದಾನಂದ॥
ಒಳಹೊರಗೂ ಬೆಳಕು ನಾನಿರಲು ಯಾಕ ನಿನ ಹಣತಿ।
ಬಾರ ನನ ಗೆಣತಿ॥

# ಅನಂತ ಪ್ರಣಯ

ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮಿಸುತಿದೆ.

ಭೂರಂಗಕೆ ಅಭಿಸಾರಕೆ ಕರೆಯುತ
ತಿಂಗಳು ತಿಂಗಳು ನವೆಯುತಿದೆ
ತುಂಬುತ, ತುಳುಕುತ ತೀರುತ ತನ್ನೊಳು
ತಾನೆ ಸವಿಯನು ಸವಿಯುತಿದೆ,

ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ
ಕೋಟಿ ಕೋಟಿ ಸಲ ಹೊಸಯಿಸಿತು.
ಮಿತ್ರನ ಮೈತ್ರಿಯು ಒಸಗೆ ಮಸಗದಿದೆ
ಮರುಕದ ಧಾರೆಯು ಮಸೆಯಿಸಿತು.

ಅಕ್ಷಿ ನಿಮಿಾಲನ ಮಾಡದೆ ನಕ್ಷ-
ತ್ರದ ಗಣ ಗಗನದಿ ಹಾರದಿದೆ.
ಬಿದಿಗೆಯು ಬಿಂಬಾಧರದಲಿ ಇಂದಿಗು
ಮಿಲನದ ಚಿಹ್ನವು ತೋರದಿದೆ.

# ಅಷ್ಟು ಪ್ರೀತಿ ಇಷ್ಟು ಪ್ರೀತಿ

ಅಷ್ಟು ಪ್ರೀತಿ ಇಷ್ಟು ಪ್ರೀತಿ-
ಎಣಿಸಿ ಕಷ್ಟಬಡದಿರು
ಒಲಿದು ಒಲಿಸಿ ಸುಖವಿರು
ಎಷ್ಟೆಯಿರಲಿ ಅಷ್ಟೆ ಮಿಗಿಲು—ತಮ್ಮ ಕಿರಣ ತಮಗೆ ಹಗಲು;
ಉಳಿದ ಬೆಳಕು ಕತ್ತಲು
ಬಿಟ್ಟಲ್ಲಿಯೆ ಬೀಡು ಮತ್ತೆ ಆಡಿದಲ್ಲಿ ಅಂಗಳು
ಉಳಿದ ಲೋಕ ಹಿತ್ತಲು.

ಮುತ್ತಿನೆಕ್ಕಸರವೆಸಿಕ್ಕೆ
ಮುದ್ದಿಗೆ ಕಳೆಕಟ್ಟಿತೆ?
ತೊಯ್ದು ಎವೆಗೆ ಮುದ್ದನಿಡಲು
ಮುದ್ದಿಗೆ ಅದು ತಟ್ಟಿತೆ?
ಕುದಿದು ಬಂದ ಕಂಬನಿಯಲು
ಕಂಪು ಬರದೆ ಬಿಟ್ಟಿತೆ?
ಮುತ್ತುರತುನ ಹೊನ್ನು ಎಲ್ಲ
ಕಲ್ಲು ಮಣ್ಣು ವೈಭವಾ
ಎಲವೊ ಹುಚ್ಚು ಮಾನವಾ
ಒಂದು ಷೋಕು—ಬರಿಯ ಶ್ಲೋಕು
ಬದುಕಿನೊಂದು ಜಂಬವು
ಒಲವೆ ಮೂಲ ಬಿಂಬವು.

ಸಪ್ತ ನಾಕ ಸಪ್ತ ನರಕ
ಅದರ ಬೆಳಕು ಕತ್ತಲು
ಮನ್ವಂತರ ತನ್ವಂತರ
ಅದರ ಕೋಟೆಕೊತ್ತಲು
ಸಿಂಹಾಸನವೇರಿ ಕುಳಿತೆ
ತೊಡೆಗೆ ತೊಡೆಯು ಹಚ್ಚಿದೆ

ಸರಿಯೆ, ಒಲಿದ ತೋಳಿಗಿಂತ
ಅದರೊಳೇನು ಹೆಚ್ಚಿದೆ?
ಎದೆಯು ಕಣ್ಣ ಮುಚ್ಚಿಕೊಂಡು
ಏಕೊ ಏನೊ ಮೆಚ್ಚಿದೆ
ಮರದ ಅಡಿಗೆ ಗುಡಿಸಲಿರಲಿ
ಅಲ್ಲೆ ಒಲವು ಮೆರೆಯದೇ
ನಲಿವು ಮೇರೆವರಿಯದೇ?

# ಕರುಳು

ತಾಮ್ರಪರ್ಣಿಯು ಒಡಲ ರಾಜವಮೌಕ್ತಿಕದ ಭಂ-
ಡಾರ ಮುದ್ರೆಯನೊಡೆಯೆ, ದಿನವು ನೀರನು ಧುಮುಕು-
ವಂಥ ಕುಂಗನು ಪಡೆವುದೇನು? ಮೈಮುರಿ ದುಡಿಯೆ
ಮರುದಿನವು ಅಣಿಗೊಳುವದಕೆ ಕೂಳತುತ್ತು; ಮನ
ಮರೆಯೆ ಕುಡಿಯಲು ಗುಟುಕು. ಹೆತ್ತ ಹೊಟ್ಟೆಯನು, ಕೈ
ಹಿಡಿದ ಮೈಯನು ತಣಿಸಲೆಂದು ದುಡಿವನೊ! ಮುತ್ತು-
ಗಾರ ಭಾಗ್ಯವನು ಲೆಕ್ಕಿಸನವನು ತಾಯಿ ಮಡ-
ದಿಯ ಹರ್ಷಬಾಷ್ಪವೇ ಅವನ ಬದುಕಿನ ಹುರುಳು.

ಭವಜಲಧಿಯಲಿ ಮುಳುಗುತೇಳುತಿರುವೀ ಜೀವ-
ರಾಶಿ ಕಾಣುವದೇನು ಕೊನೆಗೆ, ಮಕ್ಕಳ ಮುದ್ದು-
ಕೂಟಕ್ಕೆ ಬಯಸಿ? ಆ ಸಾವುಕಾರನ ಹಾಗೆ
ಕಾಳ ಕೊಸರುವ ದುಡಿಮೆ; ಮಡಿವತನಕ ಬದುಕುವದು
ತಪ್ಪಿಲ್ಲ. ಇಲ್ಲಿಯೂ ಇರದೆ "ಅಯ್ಯೋ, ನೊಂದೆ.
ಬಂದೆಯಾ ಬಾ ಕಂದ ದಣಿದೆ" ಎನ್ನುವ ಕರುಳು?

# ಸಮಸ್ಯೆ

ತಾಯಿ ಹೇಳುತಲಿದ್ದಳೆನ್ನ ಬಾಲ್ಯದ ಕತೆಯ :
ಮುಂಜಾವದಿಂದ ಮುಂಗಾಳು ಕವಿಯುವವರೆಗೆ
ಓರಿಗೆಯ ಹಸುಳರೊಡನಾಡಿ, ಬಿಸಿಲಿನ ಬೇಗೆ
ಬೆಳುದಿಂಗಳೆನೆ ಕಳೆಯುತಿದ್ದೆ. ಹಸಿವೆಯ ವ್ಯಥೆಯ
ನಾನು ಅರಿತಿರಲಿಲ್ಲ. ಆಟನೋಟಕೆ ಹೀಗೆ
ಮೆಚ್ಚಿಯೂಟವ ಮರೆಯೆ, ಕಿರುಮನೆಯ ಕತ್ತಲೆಯ-
ಲೆನಗೆ ಉಣಿಸಲು, ಕೇಳುತ್ತಿದ್ದೆ ಹಿರಿಯರ ಶ್ರುತಿಯ-
"ಬೆಳಕೆ ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ?"

ವೇದಕಾಲದಗಾಧ ದಿವ್ಯಮಾನವಹೃದಯ-
ದಾಳದಿಂದಲಿ, ಸುಖದ ಸಾಮ್ರಾಜ್ಯ ನೆಲೆಗೊಳಿಸೆ
ಸೋಲು ಗೆಲುವಿನ ತಕ್ಕೆಯಲ್ಲಿ ನುಗ್ಗಾದ ಭಯ-
ಭೀತ ಜಿಹ್ವೆಗಳಲ್ಲಿ, ಮೀಸಲೊಲುಮೆಗೆ ಆಸೆ
ಬಟ್ಟು ಕಣ್ಣೀರಿನಲಿ ಮುಳುಗುತಿಹ ಸತಿಪತಿಯ
ಕಂಠದಲಿ, ಮೂಡುತಿದೆ ಅಂದಿನೊಂದೆ ಸಮಸ್ಯೆ.

## ಸಂತತಿ

"ವರನೆ ಬಾ ಇಲ್ಲಿ; ಮುಗಿಲಿಗೆ ನೆಲವನಿತ್ತಂತೆ
ನಿನಗೊಪ್ಪಿಸುವೆನಿವಳ. ಇವಳು ಸುಕ್ಷೇತ್ರ, ಕಾ-
ಮದಲಿ ಅರ್ಥದಲಿ ಸಹಧರ್ಮಿಣಿಯು ಮುಕ್ತರೊಲು
ಚೆಲುವರನು, ಕಟ್ಟಾಳುಗಳನು, ಗಂಭೀರರನು
ಪಡೆದು ಇವಳಲಿ ಬುನಾದಿಯ ಮನೆಯು ಕಟ್ಟು, ಮುಂ-
ದಕೆ. ದೇವ ದೇವತಾ ಗಣಕೆ ಮೇಲ್ಪಂಕ್ತಿಯೆನೆ
ನಿನ್ನ ಮನದಲಿ ಹೊಳೆದು ಬೆಳೆವ, ಕನಸಲಿ ಇವಳು-
ಕೊಂಡು ಕೊನೆಯುವ ಮೂರ್ತಿಗಳನು ಮೂಡಿಸಿರಿನ್ನು"

"ಕೃತಯುಗವು ಕಲಿಯುಗಕೆ ಇಳಿದು ನಿಂತಿತು; ಮಾನ
ವನ ದುಃಖದರ್ಶನವು ಬೆಳೆದು ಬಂದಿತು; ಸುಖವು
ಕಣಸಿಲಿ ಕೆಣಕುತಿದೆ. ವಾನರರು ನರರಾದ-
ರೋ, ನರರೆ ವಾನರರು ಆಗುತಿಹರೋ? ಕವಲು
ಕವಲಾಗುತಿದೆ ಆಸೆ; ಕುಣಿಯುತಿದೆ ಪ್ರಾಣ. ಮಂ-
ತ್ರವನೆ ನುಂಗಿತೊ ತಂತ್ರ, ಎಲೆ ಕನ್ನೆ, ಮನದನ್ನೆ?"

# ಸುಖಸ್ಪರ್ಶ

ನೊಸಲು ನೊಸಲಿನಲಿರಿಸಿ ಸುಸಿಲಾಡುವುವು ಹೂವು
ಹೊಳೆ ನೀರ ಬಳಿಗೆ; ಪಡಿನೆಳಲನೆದೆಯೊಳಗಿರಿಸಿ
ಮಧುರ ಸಲಿಲ ಸಲೀಲ ನಲಿದಾಡುವದು; ಚಿತ್ರ
ರತಿಯು ನೋಡುತ ಚಿಕ್ಕೆ ಕಣ್ಣವುಟುವವು; ಮಂದ
ಮಾರುತನು ಪಿಸುಗುಡುತಲಿಹನದರ ಸೌಸವದ
ಸವಿಮಾತ; ಸಂಜೆ ಬಾಸಣಿಸಲಿದೆ ತಿಮಿರ ಜವ-
ನಿಕೆ. ಏನು ಒಗೆತನದ ಸೊಗವೊ! ಸಾಕಾರ ಸೃ-
ಷ್ಟಿಯು ಹಿಗ್ಗುತಿದೆ ಬಂಡಿನಲ್ಲು, ಬ್ರಹ್ಮಾಂಡದಲು

ಮೂಜಗಕೆ ಒಸಗೆಯೆನಿಸುವ ಸುಖಸ್ಪರ್ಶ ಬಯ-
ಸುತ ಬಳಲಿ ತೊಳಲುತಿಹರಿವರು. ನೀರೆಯರೆ? ಅಹ
ಇವರು ನರರೇ? ಮೈಯು ಮಾರಲಿಹರೇ? ಒತ್ತೆ
ಕೊಳ್ಳಲಿಹರೇ? ಎಂಜಲಕ್ಕೆ ಕುಲಗೆಡುವರಲೆ
ದೇವತೆಗಳೌರಸರು! ಏನು ವಿಧಿ ಘಟನೆಯೋ!
ಅರರೆ, ಈ ನರ ಪಿಂಡ ಹುಲ್ಲು ಹೂವಿಗು ಕೀಳೆ?

# ರಸಿಕ : ವೇದಾಂತಿಗೆ

ನಗೆಯಾಡದಿರು ನನ್ನ ನಲುಮೆ ಒಲುಮೆಯ ಕುರಿತು
ಅರಿಯೆನೇ ತುಂಬು ಮೈ ಮಾಂಸಪಿಂಡದ ಡಂಭ–
ವೆಂಬುದನು? ನಾಣು ನೆತ್ತರದಾಟ. ಮಧು ಚುಂಬ–
ನವು ಕುನ್ನಿ ಚಿನ್ನಾಟ. ಸಂತತಿಯ ತಂತು ಋತು
ಮಾನಗಳ ಮಾಟ; ಅಂತಃಕರಣ ಹುಲು ಡೊಂಬ
ನೊಲು ಕುಣಿದು ಮಣಿವಾಟ. ಅತಿಥಿ ರೂಢಿಗೆ ಹೊರತು
ಎನುವ ಮರಣವ ನಾನು ಎಂತು ಬಿಡುವೆನು ಮರೆತು ?
ವಸ್ತುವು ಸ್ವಯಂಜ್ಯೋತಿ, ಘನ ಘನ ನಿರಾಲಂಬ!

ನಗೆಯಾಡು; ಬೀಭತ್ಸ ಹಾಸ್ಯದಲ್ಲಿ, ವಿರಕ್ತಿ
ರೌದ್ರವನ್ನುಳಿದು, ಅಭಯವ ಪಡೆದು, ಭಿನ್ನರುಚಿ
ರಂಜಿಸಲಿ, ತಮವ ಹಿಂಜಿಸಲಿ, ಹರಿಯಲಿ ನಸುಕು.
ನನ್ನ ಒಲುಮೆಗೆ ಇದುವೆ ಫಲವೆಂಬೆ. ನಿತ್ಯರುಚಿ–
ಯಾನಂದ ತನುವು; ರಸರಸವು ಮೋಹದ ಮುಸುಕು
ಸತ್ಯಮಿಥ್ಯವಸರಸೆ, ಸಾಕು ಪ್ರೇಮ ದಯುಕ್ತಿ.

# ಸುಹೃದ

ಎಲೆ ಸುಹೃದ, ಸರ್ವ ಭೂತಾಂತರಸ್ಥನೆ, ನರನ
ನಾರಾಯಣನೆ, ನಿನ್ನ ಮೈತ್ರಿಯ ಉಗಾಭೋಗ
ಉಸಿರು ಈ ಹಕ್ಕಿಯಲಿ; ತುಂಬು ಜೀವವ ದೇವ.
ಯುಗಜುಗದ ಪರಿಪಾಕದಿಂದ ಬರಸಿರುವಂಥ
ಸ್ನೇಹಸಾರದ ಹದವನರಿವೆವೇ? ಕ್ಷಣಜೀವಿ-
ಗಳು ನಾವು, ಕಣ್ಣ ಆಚೆಗೆ ಕಾಣದಿರುವ ಕುರು-
ಡರು. ತನ್ನದಲ್ಲದುದು ತಲೆಯೆತ್ತಿತೆಂದು ತಲೆ-
ಕೆಡಿಸಿಕೊಳ್ಳುವ ಮೂಢ-ಮಂದ ಪ್ರಾಣಿಗಳು.

ನಾಳೆ ಬರುವದು ಬರಲಿ. ಹೃದಯ ಪುಷ್ಕರಣಿಯಲಿ
ಮಳೆ ನೀರು, ಹೊಳೆ ನೀರು, ಕೊಳೆ ನೀರು. ಕೊಚ್ಚಿ ಬರ-
ದಿರಲಿಂದು. ನಾಡಾಡಿ ಹಕ್ಕಿಗಳ ಕೂಡಿ ಕಲೆ
ಬೆರೆತಿರಲು, ಕುಡಿದುದೇ ತೀರ್ಥವೆನದಿರುವಂತೆ
ಕರುಣಿಸೆಲೆ ಉತ್ತರೋತ್ತರವನು. ಹಿಮಾಲಯದ
ಮಾನಸ ಸರೋವರದ ಗಂಗೆ ಕಲುಕಿದುದುಂಟೆ?

# ಅಗಮ್ಯ

ಮಾಯೆ ಮೈವೆತ್ತು ನಟಿಸುವಳೊ ಹೆಣ್ಣಲಿ ನಿಂತು
ಕಣ್ಸನ್ನೆಸಿ, ಮನ ಕುಣಿದಾಡಿಸುವಳು.
ಕೂದಲಿನ ಆಳದಲಿ, ಕುರುಳುಗಳ ಗಾಳದಲಿ,
ಬಾಳೆಮೀನದ ಹಾಗೆ ಆಡಿಸುವಳು.

ಮೊಗದಲಾವುದೊ ಹಗಲು ಮುಸುಕ ತೆರೆವುದೊ ಏನೊ!
ತುಟಿಯಲಾವುದೊ ಸಂಜೆ ಸೆಳೆವುದೆತ್ತೊ !
ಕಣ್ಣುಕತ್ತಲೆಗವಿಯೊ ನಗೆಯ ಮಿಂಚುಲ್ಲಟಿಸೆ,
ಚಿಕ್ಕೆ ಕಣ್ಣೆಕ್ಕುವೊಲು ಮಿಂಟುಕತಿತ್ತೊ!

ದಿನದಿನಕೆ ಯುಗಯುಗಕೆ ಜೀವ ಸೋಲೆ
ಹೀಗೆ ಸಾಗಿಹುದೇಕೊ ಮೋಹಲೀಲೆ?
ಎಂದಿಗೂ ಏಗಳೂ ಇತ್ತು ರಮ್ಯ;
ಇಂದಿಗೂ ಈಗಲೂ ಇಹುದಗಮ್ಯ.

# ತೊಗಲ ಚೀಲ

ತೊಗಲ ಚೀಲಗಳಲ್ಲಿ ಬದುಕು ನಡೆದಿದೆ. ಹೊಟ್ಟೆ
ಹೊಸೆಯುವದೆ ಬಾಳುವೆಯು; ನಿದ್ದೆ ಹಿಗ್ಗು;
ಮಣ್ಣಿನಲಿ ಅನ್ನವನು ಹುಡುಕುತಿವೆ ಕಣ್ಣುಗಳು;
ಇನ್ನುವೂ ಹತ್ತಿಲ್ಲ ಮನದ ಮೊಗ್ಗು.

ಬಾನ ತುಂಬಿದ ಶಂಖನಾದ, ತಿರುತಿರುಗುತಿದೆ
ಚಕ್ರ. ಬಣ್ಣಗಳಲ್ಲಿ ಬೀರಿ ಪ್ರಭೆಯು.
ಕಣ್ಣೆತ್ತಿ ಕಿವಿದೆರೆದು ಬಾಳಬೇಕೆಂಬುವರ
ಕರೆಯುತಿದೆ ಸಾಹಸಕ್ಕೆ, ಸಾರಿ ಅಭಯು.

ಅಡರಿಸಿ ಚಕ್ರವನು. ನುಡಿಯಿಸಿರಿ ಶಂಖ
ನಕ್ಷತ್ರ ಗುರಿಯಿರಲಿ, ಪುಂಖಾನುಪುಂಖ.
ಕಣೆಗಳಿಸೆಯಿರಲಿ, ಸಾರಿ ಸ್ವರ್ಗಕೊಳನುಗ್ಗಿ
ಬರಲಿ ಹೂವಿನ ಹಬ್ಬ, ನಲ್ಲೆದೆಯು ಸುಗ್ಗಿ!

# ಕಾವೋದೆ

೧

ಕ್ಷೀರಸಾಗರಕೆ ನಾಲ್ಕು ಕನ್ನೆಯರು
ಆ ಬಾಳಿನ ಉಸುರು
ವಾರುಣಿ ಜ್ಯೇಷ್ಠೆ ರಮೆ ಕಾವೋದೆ
ಇವು ಇವೆ ಆ ಹೆಸರು

೨

ವಾರುಣಿ ದೈತ್ಯರಿಗೊಲಿದಳು; ಮೂವರ
ವಿಷ್ಣುವು ವರಿಸಿದನು
ಆ ಕಾವೋದೆಯು ತುಳಸಿಯು ಎನಿಸಿ
ನೆಲದೊಳಗಿರಿಸಿದನು

೩

ಪತಿಯ ಧ್ಯಾನ್ಯದಲಿ ನಿಮಗ್ನ ತುಳಸಿಯು
ಮುಗುಳುನಗೆಯು ಮಾಗಿ
ಪೂಜ್ಯನ ಪದದಲಿ ಪೂಜೆಯು ಗೈವುದು
ಹೂವೇ ನಾನಾಗಿ

೪

ಅವಳ ಹಿಗ್ಗಿ ನಲೆ ಆ ಅನಂತನನು
ಸಂತತ ತಾಗುವವು
ಕಮಲನೇತ್ರದಿಂದುರುಳುವ ಕಂಬನಿ
ಕಮಲಗಳಾಗುವವು

೫

ಪುರಾಣ ಹಾಡಿದೆ ಈ ಬಗೆಯಲಿ ಕಾ-
ಮೋದೆಯ ಚರಿತವನು
ನಾ ಕಂಡುದನೇ ಹಾಡುವೆನಿಲ್ಲಿ
ಕಂಡೊಲು ಕುರಿತದನು

೬

ದೇವ ದಾನವರ ಪಂಕ್ತಿಗೆ ವಿಷ್ಣುವು
ಅಮೃತ ಬಡಿಸುತಿರಲು
ಅಮೃತಸ್ಪರ್ಶದಲಿ ಅಮೃತದೃಷ್ಟಿಯಲಿ
ತಿರುಳಾಗದೆ ನೆರಳು

೭

ಅಮೃತಕಳಶದಲಿ ಮೋಹಿನಿ ರೂಪವು
ಪ್ರತಿಬಿಂಬಿಸಿದಂದು
ಆ ಪ್ರತಿಬಿಂಬವು ಬಿಂಬವ ಕಾಮಿಸಿ
ಬಂದಿತು ಮೈಗೊಂಡು

೮

ಮೋಹಿನಿರೂಪದ ತೆರೆ ಬಯಲಾಗಲು
ವಿಶ್ವರೂಪದಲ್ಲಿ
ಕಾಮಿಸಿದೀ ಮೈ ಆ ಮೈಗೂಡಿತು
ಅದು ಕಂಡಲ್ಲಲ್ಲಿ

೯

ನೀರಾಗಲು ಅದು ರುಚಿಯಾಯಿತು ಇದು
ಬೆಂಕಿಗೆ ಬೆಳಕಾಗಿ
ಹೂವಿಗೆ ಕಂಪು ಗಾಳಿಗೆ ತಂಪು
ಅಸುವಿಗು ಕಸುವಾಗಿ

೧೦

ಅನಂಗ ಕಾಮುಗೆ ಸಾಂಗರತಿಯು ಆ-
ಲಿಂಗನಗೊಡುವಂತೆ
ನೋಡಿತು ನಕ್ಕಿತು ಬೇಡಿತು ಕೂಡಿತು
ಹುರುಳನೆ ನೆರಳಂತೆ

೧೧

ಕಾಮುವು ಉದಿಸಿ ಮೋದವು ಮುದಿಸಿ
ಕಾಮೋದೆಯು ಜನಿಸಿ
ನೆಲದಲ್ಲೆಲ್ಲ ಕುಣಿದಳು ತುಳಸಿ
ಅತುಲ ಸತಿಯು ಎನಿಸಿ

೧೨

ಕಾಮೋದೆಯು ಆ ಆಮೋದಕೆ ಇಗೊ
ಗಮಗಮಿಸಿದೆ ನೆಲವು
ನೋಟವು ಹಗಲು ನಗೆ ಬೆಳದಿಂಗಳು
ಆಗಿದೆ ಅವಳೊಲವು

೧೩

ತಾರಕೆ ಮಿರುಗೆ ಆಗಸ ತುರುಗೆ
ಹುಲ್ಲಲ್ಲೊರಗುವಳು
ಮೈಯಲಿ ಸೊರಗಿ ಎದೆಯಲಿ ಮರುಗಿ
ಕಣ್ಣಲಿ ಕರಗುವಳು

೧೪

ನಿರಂತರದ ಈ ಅನಂತಪ್ರಣಯಂವು
ನಡೆದಿದೆ ಎಂದೆಂದೂ
ತಂತವ್ಮೊಲವಿನ ಚೆಲುವರಸುತ್ತಿವೆ
ಜೀವವು ಒಂದೊಂದೂ

೧೫

ಜೀವ ಜೀವದಲಿ ಕಾವೋದೆಯು
ಜೀವಾಳವು ಬಾಳಾಗಿ
ವಿಶ್ವದಾಳದಿಂದಾಳುತಲಿಹುದು
ಆಳಿಗು ಆಳಾಗಿ

# ಕಲ್ಪವೃಕ್ಷವೃಂದಾವನಂಗಳಲಿ

ಕಲ್ಪವೃಕ್ಷವೃಂದಾವನಂಗಳಲಿ
ಹೇಗೊ ಹೊಕ್ಕು ಬಂದೆ
–ಅಲ್ಲ ಎಚ್ಚರವು ಅಲ್ಲ ನಿದ್ರೆಯೂ
ಏನೊ ಯೋಗದಿಂದೆ।
ಸುಳಿದೆ ಅಲ್ಲಿಯೂ ನನ್ನ ಸಹಜಸುಖಿ
ನೀನು ಹಿಂದೆ ಮುಂದೆ ॥

ಕೇಳು ಕಮಲಮುಖಿ ಏಳು ಜೀವಸಖಿ
ಕಂಡ ಸುಖದ ಕೀಲ ।
ಬಾಲ ಸುತ್ತಿ ಹೆಡೆಯೆತ್ತಿ ತೂಗುತಿರೆ
ಭೋಗಸುಪ್ತಕಾಲ ।
ಈ ತೋಳಿನಲಿ ಹೋಳು ಮೈಯಿರಲು
ಬೀಸಿತಿಂದ್ರಜಾಲ ॥

ಕತ್ತಲಲ್ಲಿ ಕಣ್ಣಾಗಿ ನೋಡುತಿದೆ
ನೂರು ಇಂದ್ರರಂತೆ ।
ಬೆಳಕುನಾಯಿ ಮೈಮೂಸಿ ಬರುತಲಿದೆ
ಶುಕ್ರ ಚಂದ್ರರಂತೆ ।
ಕಂಪೆ ಕಂಪಲ್ಲಿ ಗಾಳಿ ಹೂತಿತೋ
ಏನೊ ಎನ್ನುವಂತೆ ॥

ಮನದ ಚಿತ್ರಗಳ ಮೈಯ ತಾಳಿದೊಲು
ಗೆಳತಿ ಗೆಳೆಯರಾಗಿ ।
ಸರಸ ವಚನಗಳ ಕರಗಿಸುತ್ತಿರಲು
ಜೀವರಸಗಳಾಗಿ
ಹೊಮ್ಮಿತದರ ಸವಿ ತೃಣವನಾದದೊಳು
ಪ್ರಣಯನಾದವಾಗಿ ॥

ಅಲ್ಲಿ ಎಲ್ಲರಿಗು ನಾಲ್ಕು ಕೈಗಳೇ
ಮಾಟ ತಪ್ಪದಿಹವು ।
ಎರಡುಂ ಒಪ್ಪಿಸಿವೆ ಕುಶಲ ಕಲೆಗಳಲಿ
ಎರಡು ಅಪ್ಪಿ ಇಹವು ।
ಎಲ್ಲರಲ್ಲಿ ತಲ್ಲೀನರಾಗಲೋ
ಜೀವ ಜಪ್ಪಿಸಿಹವು ॥

ಕಾಮನ ಬಿಲ್ಲಿಗೆ ಬಾಣ ಹೂಡಿದೊಲು
ಕಂಗಳೆಸೆಯುತಿಹವು ।
ತೋಳುತೋಳಿನಲಿ ಕಸೆಯ ಮಾಡಿದೊಲು
ಎದೆಯ ಬೆಸೆಯುತಿಹವು ।
ಪ್ರಾಣದುಕ್ಕಿನಲಿ ಪ್ರೀತಿಜ್ಯೋತಿಗಳು
ಮಿಂಚಿ ಮುಸೆಯುತಿಹವು ॥

ಜೇನುನೊಣಗಳೊಲು ಹಾವಭಾವಗಳಂ
ಇನಿದು ಜಿನುಗುತಿಹವು ।
ಹೊನ್ನಹುಳಗಳೊಲು ಓರೆನೋಟಗಳು
ಹಾರಿ ಮಿನುಗುತಿಹವು ।
ಬಳ್ಳಿಮಾಡಗಳು ಸನ್ನೆ ಮಾಡುತಿವೆ
ನನಗು ನಿನಗು ಬರಲು ॥

ಪಾರಿಜಾತಗಳು ಮುದ್ದುಗರೆಯುವವು
ಹವಳದುಟಿಗಳಿಂದ ।
ಕಂಪ ಸೂಸಿ ಮಂದಾರ ಉಸಿರ ಬೆರೆ-
ಯುವವು ಸುಮನದಿಂದ ।
ಸ್ಪಂದಿಸುವದು ಹೃದ್ಪಂಥ ತುಂಬಿದಾ-
ನಂದನಾಡಿಯಿಂದ ॥

ಬಯಕೆ ಮೂಡದಲೆ ಬಯಸಿದೊಡವೆಯೂ
ಕೈಗೂಡುತ್ತಿತ್ತು ।
ಪಡೆದ ಬದುಕನೇ ಬಯಸುತ್ತಿದ್ದೆನೋ
ಎನ್ನುವಂತೆ ಇತ್ತು ।
ಕೊಡುವ ಕೈಯೆ ತಾನಾಸೆ ಕೊಡುವದೋ
ಯಾರಿಗೇನು ಗೊತ್ತು ॥

ರಕ್ತಕಣಗಳೂ ಜೀವದಣುಗಳೂ
ಕಣಿಯ ಕೊಡುತ ಹೊಳಲು ।
ತನ್ನ ಉಸಿರನೇ ನನ್ನದಾಗಿಸುತ
ಮೆಲ್ಲನೊಲಿಸಿಕೊಳಲು ।
ಎದೆಯಲಾವುದೋ ದನಿಯು ಮೂಡುತಿದೆ
ಊದಿದಂತೆ ಕೊಳಲು ॥

ನೋಡುತಿರಲು ಒಳಗಣ್ಣನಿದಿರು ನೀ
ಹೇಗೊ ರಾಧೆಯಾದೆ ।
ಕೇಳುತಿರಲು ಒಳಗಿವಿಯು ಕೊಳಲು ನ-
ನ್ನೊಳಗೆ ಮಾಯವಾದೆ ।
ನಾನು ನೀನೊ ನೀ ನಾನೊ ಏನೊ ಎನು-
ತೆನುತಲೆಚ್ಚರಾದೆ ॥

# ಕೊಳಲನೂದಿದ

## ಒಂದನೆಯು ಹಾಡು

[ಆಕಳ ಹಿಂಡಿನೊಡನೆ ಬರುವ ಗೋಪಿ ಏನೋ ಕೇಳಿಸಿದಂತೆ ಬೀದಿಯಲ್ಲಿ ಗಕ್ಕನೆ ನಿಂತದ್ದನ್ನು ನೋಡಿ ಆಕೆಯು ಸಖಿ ಕೇಳುತ್ತಾಳೆ.]

ಕೊಽಲನೂದ್ಽದಾನೇನ್ಽ –ಕೃಷ್ಣ ;
ಕೊಳಲನೂದಿಽದಾ ॥ ಪಲ್ಲ ॥

ತಿರುವುಗಿವಿಯು ಮಾಡಿ ಆವು
ನಿಂತವಕ್ಕ ನಿಂತಲ್ಲೇನಽ
ನೀನು ಕೂಡ ಬೀದಿಯಲ್ಲಿ
ನಡಿಯುದಽನ ತಡೆದು ನಿಂತಿ ॥ ಕೊಳಲ....

ಕಣ್ಣು ನೀರು ಸುರಿವುದೇಕೆ
ನಿನ್ನ ಚಿತ್ತ ಕರಗಿತೇನಽ
ಯಾವ ಭಾವ ಪಾಕವಾಗಿ
ತುಂಬಿ ತುಳುಕಿ ಸೂಸಿತಿಲ್ಲಿ ॥ ಕೊಳಲ....

ಏನೋ ನೋಡಿ ಕಾಣದಂತೆ
ಏನೊ ಕೇಳಿ ಕೇಳದಾಗಿ
ಏನೊ ಹೇಳ ಹೇಳಹೋಗಿ
ಆಡದೇನಽ ಇರುವಿ ನೀನು ॥ ಕೊಳಲ....

ಗಲ್ಲದಲ್ಲಿ ತುಪ್ಪುಳೆದ್ದು
ಉಬ್ಬಿ ಹಿಗ್ಗಿ ನಡೆಯುತಿರುವಿ
ಗದ್ದವಿಡಿದು ತುಟಿಯು ತಾಕಿ
ಸೋಕಿ ಹೋದಿತೇನಽ ನಿನ್ನ ॥ ಕೊಳಲ....

ಯಾವ ಲೋಕದಿಂದೊ ಬಂದ
ಬಿಂಬ ಮೊಗವನರಳಿಸುವದು
ಮುದ್ದು-ತುಂಬಿ ಮುಟ್ಟಿತಕ್ಕ
ಬಣ್ಣವೇರಿ ಕಣ್ಣ ಬಿಡುವೆ ॥ ಕೊಳಲ ...

ಜೀತಸೂತ್ರಧಾರ ನಿಮ್ಮ
ಪಾತ್ರವಾಡಿಸುವನೇನು
ಇಷ್ಟು ಕೇಳಿ ಕಿವುಡಳಿರುವೆ
ಎಲ್ಲಿ ತನ್ಮಯಳಾದೆ ನೀನು ॥ ಕೊಳಲ....

ರಂಗ ತಾನು ಇದ್ದಲ್ಲಿಂದ
ತನ್ನ ನಲ್ಲೆಯರಿಗೆಲ್ಲ
ಗಾಳಿ ಸುಳಿಯು ತಾನವಿಡಿದು
ಮುದ್ದ ತೇಲಿಬಿಟ್ಟನೇನು ॥ ಕೊಳಲ....

## ಎರಡನೇ ಹಾಡು

[ಗೋಪಿ ಆನಂದ ಸಮಾಧಿಯಿಂದ ಎಚ್ಚತ್ತು ಹೇಳಿದ್ದು.]

ಕೊಳಲನೂದಿದನು । ಸ್ವಾಮಿ ।
ಕೊಳಲನೂದಿದ । ಎಲ್ಲೋ ।
ಕೊಳಲನೂದಿದ ॥ ಪಲ್ಲ ॥

ಕೋಲು ಹಾಕಿದಂತೆ ಕಾಲ
ತಾಲದಲ್ಲಿ ಕುಣಿಯುತಿರಲು
ಮೂಲ ಹಿಡಿದು ಅಲ್ಲಾಡಿಸಿದ
ಬಳ್ಳಿಯಂತೆ ಬಳುಕಿತು ಜೀವ॥ ಕೊಳಲ....

ಕಣ್ಣು ಸನ್ನೆಯಿಂದ ನಮ್ಮ
ತಮ್ಮ ಎದೆಗೆ ಎಳೆದುಕೊಂಡು
ಭಿನ್ನಭಾವ ಮರಸಿ ಕಲೆತು
ಬೆರೆತು ಇಲ್ಲೆ ಒಡನಾಡಿದ॥ ಕೊಳಲ....

ಸುಗ್ಗಿಗೊರಳ ಕೋಗಿಲಂತೆ
ನುಗ್ಗಿ ದನಿಯ ಪಂಚಮದಲ್ಲಿ
ಮುಗ್ಗಿಬಿದ್ದು ಮುಗಿಯದ್ಕ
ಮುತ್ತುವಂತೆ ಸುತ್ತುವಂತೆ॥ ಕೊಳಲ....

ಎಂಥ ಸ್ನೇಹ ಏನು ಮೋಹ
ಒಂದು ಪ್ರಾಣ ನೂರು ದೇಹ
ಹೊಂದಿ ಬಿಡಿಸಿ ಚೆಂದವರಿತು
ರಾಸಲೀಲೆ ಆಡಿವಂತೆ॥ ಕೊಳಲ........

ಹುಣ್ಣಿಮೆಯ ರಸವೆ ಹರಿದು
ಕಣ್ಣುತುಂಬಿ ಮೈಯ ತುಂಬಿ
ಹಣ್ಣಗೊಳಿಸಿ ಹದಕೆ ತಂದು
ತೆನೆಗೆ ಹಾಲು ತುಂಬಿದಂತೆ॥ ಕೊಳಲ....

ಯಾವ ಜನ್ಮದಲ್ಲೊ ಏನೊ
ನಾವು ತೊರೆದು ಬಂದ ಕರುಳು
ಜೀವ ಮಿಡಿಸಿ ನುಡಿಸಿ ನುಡಿಸಿ
ತಾಯಿ ಬಾರೆ ಎನ್ನುವಂತೆ॥ ಕೊಳಲ...

## ಮೂರನೆಯ ಹಾಡು

[ಕೊಳಲೂದಿದಲ್ಲಿಯೆ ಇದ್ದ. ಆದರೆ ಅದರ ಮಾಯೆಯಲ್ಲಿ ಮೈಮರೆತು ಆಮೇಲೆ ಸುತ್ತಲಿನ ಪ್ರಪಂಚದಿಂದ ಕೊಳಲು ಊದಿರಬೇಕೆಂದು ಸುಖಾನು ಭವ ಮಾಡಿದ ಗೆಳೆಯ ಹೇಳಿದ್ದು.

ಕೊಳ್ಳಲನೂದಿದನೊ। ಗೆಳೆಯ।
ಕೊಳ್ಳಲನೂದಿದ। ಇಲ್ಲೆ।
ಕೊಳ್ಳಲನೂದಿದ ॥ ಪಲ್ಲ ॥

ಜುಮ್ಮುತಟ್ಟಿ ಯಮುನೆ ಇನ್ನೂ
ಮಂದಗಮನೆಯಾಗಿರುವಳು
ಕನಸಿನಲ್ಲಿ ಕಂಡಿನಿಯನ
ನೆನೆಸಿಕೊಂಡು ನಡುಗುವಂತೆ॥ ಕೊಳಲ......

ಬಿದಿರು–ಮೆಳೆಗಳೆಲ್ಲ ಇನ್ನೂ
ಸಿಳ್ಳು ಹಾಕತಾವ ಹಾಂಗs
ಮುರುಳು ಹಿಡಿದ ನಲ್ಲನಂತೆ
ತೆರಳಿ ಹೋದ ನಲ್ಲೆಗಾಗಿ॥ ಕೊಳಲ...

ಹಳ್ಳವಾಗಿ ಬಂದ ಹಾಲು
ಹಾದಿಗುಂಟ ಹರಿವುದಿನ್ನೂ
ಮುಡುವುಗಟ್ಟಿಕೊಂಡ ಗೋಪಿ–
ನೆಡೆಯ ತೋರುವಂತೆ ತಾನು॥ ಕೊಳಲ........

ಬಾನು ತೊಳಗಿ ಹೊಳೆವುದಿನ್ನೂ
ನೀಲಿ ಹರಳ ಗಣಿಯು ಹಾಂಗs
ಶಾಮಸುಂದರನಪ್ಪಿದನೇನೊ
ಸೀಮೆಯನ್ನ ಎಂಬುವಂತೆ॥ ಕೊಳಲ......

ಶ್ರಾವಣsನ ಗೆಜ್ಜೆ ಹೆಜ್ಜೆ
ಕುಣಿದು ಹೋದುವೇನೊ ಇನ್ನೂ
ಅಲ್ಲೂ ಇಲ್ಲು ಎಲ್ಲು ಹಸಿರು
ಹುಲ್ಲೆ ಹುಲ್ಲು ಹೂವೆ ಹೂವು॥ ಕೊಳಲ...

ಕಳೆದ ಕರುವಿಗಾಗಿ ಗೋವಿ
ನೆಲವ ಮೂಸಿ ಮೂಸಿ ಮೂಸಿ
ಹುಡುಕುವಂತೆ ಹುಚ್ಚುಗಾಳಿ
ತಡೆದು ತಡವುತಿಹುದು ಇನ್ನೂ॥ ಕೊಳಲ........

ಮರವು ಬಳ್ಳಿ ಹಸವು ಹಕ್ಕಿ
ಗುಂಡ್ಡುಗಣಿವೆ ಗವಿಗಳನ್ನೂ
ಕೊಳಲ ಹಾಡು ಕೇಳುವಂತೆ
ಹೊಳಲಗೊಟ್ಟು ಅಲೆಯುತಿಹವು॥ ಕೊಳಲ...

ಮಣ್ಣುಗೊಂಬೆಗಳಿಗೆಲ್ಲಕೆ
ಜೀವಕಳೆಯು ತುಂಬಿದಂತೆ
ಜಡವೆ ಜಂಗಮವಾದಿತಿಲ್ಲಿ
ಕೊಳಲಿನುಸಿರು ಪಸರಿಸೀಗ॥ ಕೊಳಲ......

ಮೈಗೆ ಮೈಗೆ ತುಟಿಯು ಸೋಕಿ
ಕೊರಳ ಮೇಲೆ ಬೆರಳಾಡಿಸಿ
ಮಾತುಮಾತು ತೂತುಮಾಡಿ
ಅಂಬಿಕಾತನಯನ ತುಂಬಿ

ಕೊಳಲನೂದುವ। ಇಂದೂ।
ಕೊಳಲನೂದುವ॥

# ಕೊಡುವುದೇನೊ? ಕೊಂಬುವುದೇನು?

ಕೊಡುವುದೇನು? ಕೊಂಬುದೇನು
ಒಲವು, ಸ್ನೇಹ, ಪ್ರೇಮ
ಹೊರಗೆ ಬರಿದು, ಒಳಗೆ ಬಲಿದು
ಇದ್ದವರಿಗೆ ನೇಮ.

ರವಿಯು ಶಶಿಯು ತಂಪು ಬೆಳಕು
ಛಂದದ ಋತುವಾನ
ಒಲಿಸಿ ಒಲಿವ ನಲಿಸಿ ನಲಿವ
ಜೀವ ದಿವ್ಯಗಾನ

ಹೃದಯ ಹೀನ! ಜೀವ ದೀನ!
ದೇವ ಬಡವನೇನೋ?
ನೆಲವು ನೀರು ಗಾಳಿ ಬೆಳಕು
ಬಾನು ತುಂಬ ಜೇನು.

ಕಷ್ಟದಲ್ಲು ಅವನ ಕರುಣೆ
ಪಾಲೆವಶಾಲೆಯಾಗಿ
ನಮ್ಮ ಕಟ್ಟಿ ಎಳೆವುದಣ್ಣ
ಮುಕ್ತಿಶಾಲೆಗಾಗಿ

ಅಮೃತದೊರತೆಗೇನು ಕೊರತೆ?
ಅವನ ಹೊರತೆ ಬಾಳು
ಎದೆಯ ಒಲುಮೆ ಅವನ ಕುಲುಮೆ
ಬೇರೆ ಒಲುಮೆ ಹಾಳು.

ಕೊಟ್ಟು ಕೊಂಡು ಬೆಳೆವುದೆಲ್ಲ
ಪ್ರೇಮಕಲ್ಪವಲ್ಲಿ
ಹೂವೊಳಿಲ್ಲಿ ಚಿಕ್ಕೆಯಲಿ
ಜೀವಜಾತದಲ್ಲಿ,

ಕಾಯದುಸಿರ ಕಳೆದು ನೋಡು
ಜೀವದುಸಿರನೆಳೆದು ನೋಡು
ಆವನ ಒಲವ ನಂಬಿ
ನಲಿವು ಬಲವು ಹಲವು ಚೆಲವು
ಜಗದ ಮೂಲವೆಂಬಿ
ಜೀವನಯನ ತೆರೆಯ ಕಾಂಬಿ
ಒಲವಿನಲ್ಲೆ ತುಂಬಿ.

# ಜೀವನ-ಕಲ್ಯಾಣ

[ಕೋಲುಹಾಡು]

ಜೀವನ ಒಂದು ನಾಽಟಕಽ
ಹೂವು ಹಣ್ಣಿನಾ ಕೂಟಕಽ ॥ ಪಲ್ಲ ॥

ಮಲ್ಲಿಗಿ, ಮಲ್ಲಿಗಿ, ಅಲ್ಲಿಗಿ, ಇಲ್ಲಿಗಿ
ಎಲ್ಲಾನು ಮಲ್ಲಿಗಿ ನೋಡಣ್ಣಾ ॥
ಮಾವು ಮಾವು ನಾವು ನೀವು
ಎತ್ತಾನು ಮಾವು ನೋಡಕ್ಕಾ ॥ ಅನುಪಲ್ಲ ॥

ಬೇವಂಬೋದು ಅಧರದ ಮ್ಯಾಲೆ
ನೋವಂಬೋದು ಉದರದ ಒಳಗ
ಜೀವಂಬೋದು ಮಕ್ಕಳ ನೋಟ
ಮಾಯಾದೇವಿ ಮಾಟಕ್ಽ ॥ ಜೀವನ ಒಂದು...

ಹರೆಯೆಂಬೋದು ತೆರೀಹಾಂಗ
ಬಂತ ಅಂತ ಹೊರಟಿತು ಬ್ಯಾಗ ॥
ಬಾ ಸಿಂಗಾರದ ಬ್ಯಾಟಕಽ
ಮುಗಿಯಽದ ಆಟಕಽ ॥ ಜೀವನ ಒಂದು...

ಮರಣದ ಹಡದಿ ತಿಳಿದೂ ತುಳಿದೂ
ಶರಣರ ಹಾದಿ ಹುಡುಕತೇವಿ ॥
ಕರುಣದ ಕಣ್ಣು ಕಂಡಿತಕ್ಕಽ
ಗಂಗೀ ಗೌರೀ ನೋಟಕಽ ॥ ಜೀವನ ಒಂದು....

ನಂಜುಂಡೇವ ಅರುವಿಗೆ ಕದ್ದು
ಕೈಲಾಸಂಬೋದು ಮುಗಿಲ ಮುದ್ದು ॥
ಜನ್ಮ ಜನ್ಮಕೂ ಒಂದಽ ಹಣ್ಣು
ಶಿವ ಶಿಂಗಾರದ ತ್ವಾಟಕ್ಽ ॥ ಜೀವನ ಒಂದು...

# ಜೀವನನಾಟ್ಯ

ಇದ್ದುದಿಲ್ಲವನು ಒಂದೆ ಶೂನ್ಯದಲಿ ಸುತ್ತಿಕೊಂಡ ನಿದ್ದೆ.
ಎದ್ದಮೇಲೆ ಎರಡೊಂದ ಮಾಡಿ ಬೆಳೆಸುವುದು ಸೃಷ್ಟಿವಿದ್ಯೆ.
ಗಂಡುಸೆಂತೊ ಸಂತಯಿಸಿಕೊಳಬಹುದು ಪರಬ್ರಹ್ಮದಂತೆ.
ಮಕ್ಕಳಿಲ್ಲದೀ ಬಾಳನೆಂತು ಸಹಿಸುವಳು ಪ್ರಕೃತಿಕಾಂತೆ ?

ಹೆರಲುಃ ಹೊರಲು ಹೊಟ್ಟೆಯನೆ ತೆರೆದು ತಂನೀರಿನಲ್ಲೆ ಕಟ್ಟಿ
ಹುಟ್ಟಿಯಲ್ಲಿ ಹನಿಜೇನನೊಟ್ಟದೊಲು ಒಲುಮೆಯನ್ನೆ ಒಟ್ಟಿ
ಮುಟ್ಟಿ ಕಟ್ಟಿ ತನಿ ಮೂರ್ತಿಗೊಳಿಸಿ ಮುತ್ತಿಡಲು ಹೊರಕೆ ತಂದು
ಬಯಲನೊಂದು ಗುಡಿಸುತಿಹಳು ಒಳುಬಾಳ ಹರಕೆ ಎಂದು.

ಮಣ್ಣುಗೊಂಬೆ ಒಳಗಣ್ಣಗೊಂಬೆಯಲಿ ನಾಟಿ ಮುದ್ರಿಸಿರಲು
ತನ್ನ ನೆನೆವನೇ ತಾನೆ ನೆನೆಸಿ ಒಳವೊಳಗೆ ನಿದ್ರಿಸಿರಲು
ಹೃದಯ ಮುದ್ರೆಯನು ಬಿಚ್ಚಿ ನಾಡಿಯಲಿ ಬೀಜ ಬಿಂದುಗೂಡಿ
ನಾಟ್ಯವಾಡಲನುವಾಗುತಿಹವು ಅವು ಏನೋ ಆಟ ನೋಡಿ.

# ಪ್ರೇಮಬೀಜ

ಇಳೆಯ ಮಕ್ಕಳೆಲ್ಲ ಬನ್ನಿ
ತಾಯ ತವರುಮನೆಗೆ
ಭೇದ ಬಲಿಸಿ ಬಳಲಬೇಡಿ
ಎಂದು—ನನಗೆ ನಿನಗೆ.

ಇದು ಬಿಳಿವೂ ಇದು ಕರಿವೂ
ಹಗಲು ಇರುಳು ಬಣ್ಣಾ.
ಕೆಂಪನಿವಾ ಹಳದಿಯವಾ
ಅಂದಚೆಂದವ ಬಣ್ಣಾ.

ಎದೆಯಾಳದ ರಕ್ತದಲ್ಲಿ
ಭಾವದ ಅನುರಕ್ತಿಯಲ್ಲಿ
ಕಾವಿನ ಚಿತ್‌ಶಕ್ತಿಯಲ್ಲಿ
ಕಂಡ ಶಾಂತಿ ಗೀತ,
ಕರೆದು ಜನ್ಮಮರಣಗಳಿಗೆ
ತಾರಕರಾ ಚರಣಗಳಿಗೆ
ಜೀವಾಂತಃಕರಣಗಳಿಗೆ
ನೀಡಿತು ಸುಪ್ರೀತ

ಪ್ರೇಮಬೀಜ ಮೂಲ ನನಗೆ
ಪ್ರೇಮಬೀಜ ಫಲದ ಗೊನೆಗೆ.

# ಒಲವು ಲಿಂಗೆ

ಇದ್ದು ಇಲ್ಲದೊಲು ಇದ್ದಿತು ಒಲವು
ಇದ್ದಿಲ್ಲ ಕಲ್ಲಿನಲ್ಲು,
ಅಂತಃಸ್ಪರ್ಶ ಎಂತಹ ಹರ್ಷ.
ಮೌನದ ಸೊಲ್ಲಿನೊಲು

ವಿದ್ಯುಚ್ಛಿದ್ದ ಬೆಂಕಿಗೆ ಶುದ್ಧ
ಬೆಳಕಿನ ಬುದ್ಧನಿಗೋ !
ಬದ್ಧತೆಯಲ್ಲಿಯೆ ಸಿದ್ಧತೆ ನಡೆದು
ಕೆಂಡವೊಳೆದ್ದನಗೋ !

ಕಾರ್ಬೊನ್ ಕಣವೇ ಕೆಂಬೊನ್ನಾಗಿ
ಕಿನಿಕಿನಿ ಕದಿರುವದು.
ಗಾಳಿಯು ಗತಿಯೋ, ಬೆಳಕಿನ ಜತಿಯುಲಿ
ಅರಿವೆನೆ ಕುದುರುವದು.

# ಅಹಲ್ಯೆ

ಒಲವನು ತೋರುವ ಕಣ್ಣಲಿ ಮೂಡಿದೆ ಕೆಂಗಿಡಿಯು.
ಒಲವನು ನೀಡುವ ಎದೆಯಲಿ ಜಡಭಾವದ ಝರಿಯು.
ಮುನಿ ನೊಂದನು 'ಛೀ' ಎಂದನು ನಂಬಿಗೆಗಿದೆ ಎಲ್ಲೆ.
ಬೆರಗಾದಳು ಬಿಲ್ಲಾದಳು ಕಲ್ಲಾದಳಹಲ್ಯೆ.

'ಎಲೆ ಜಾರಿಣಿ ನೀ ಜಾರಿದೆ ಜಾರಿದೆ ಝರ್ಝರನೆ.'
ಎಲೆ ಮನ ಮರುಗಿತು ಮಡಗಿತು ಅಲ್ಲೇ ಮರ್ಮರನೆ
ರಾಮ ರಾಮ ರಾಮ ರಾಮ ಏನಿದು ಈ ಮಾತು !
ನಿಂತಲ್ಲಿಯೆ ಇಲ್ಲಾದಳು ನಲ್ಲೆಯು ಒಳಸೋತು.

ನೆಲ ತಿರುಗಿತು, ಋತು ಮರುಗಿತು, ಮೊರೆಯಿತು ನೀರಿನಲೆ.
ಜೀವನ ಪರಿಪಾಕದ ಗತಿ ಬೆದ ಬೆದ ಕುದಿಯುತಿರೆ
ಯುಗ ತೆರಳಿತು, ಮೊಗವರಳಿತು, ರವಿಯಲಿ ಹೊಸ ನೋಟ.
ಶ್ರೀರಾಮನ ಪತ್ನೀವ್ರತ ವಿರಹದ ಮುಸೆದಾಟ.

ರಾಮನ ಪಾದಸ್ಪರ್ಶಕೆ ಚಿಗುರಿತು ಒಳುಜೀವ.
ನೀರಿನ ನೋಟಕೆ ತೆರೆದಿತು ಕಣ್ ನಾರೀಭಾವ.
ಭಗವತ್ಪಾದಕೆ ಪರಿಣತಿ–ಅದ್ಭುತವಿದ್ದಲ್ಲೇ.
ಒಲೆಯಿತು ಅಲೆಯಿತು ನಲಿದಿತು ಕಲ್ಲಾಯಿತು ನಲ್ಲೆ.

# ಒಲವಿನ ನಿಲುವು

"That to feel love and oneness is to live."
Savithri, Book XII

ಒಲವಿನಲ್ಲಿ ಪೆಳಿ, ಒಲವಿನಲ್ಲಿ ಉಳಿ, ಒಲವೆ ಬಾಳ ಚೆಲುವು
ಒಲ್ಲದಿಲ್ಲ, ಒಲಿಯುವುದ ಎಲ್ಲ, ಒಲಿಯುವುದೆ ಬದುಕು–ಬಲವು
ನಾಂದ ನಾಲಗೆಯ ನೀರಿನಲ್ಲಿ ನೆನೆಯುವುದು ನಲುಮೆ–ನಲಿವು
ನಲ್ಲರೆದೆಯ ನನ್ನಿಯಲಿ ಹೂತು ಜಗ ತುಂಬುತಿಹವು–ಹಲವು.

ಹುಂಜ ಹೇಂಟೆಗಳ ಕಾವಿನಲ್ಲಿ ರೂಪಾಯ್ತು ನೀರ ತತ್ತಿ
ಆಕಾಶ ತುಂಬಿ ಆನಂದವಿತ್ತು ಆನಂದವನ್ನೆ ಬಿತ್ತಿ
ಜಗವು ಜಂಗಮವು ಜೀವ ಪ್ರಾಣಗಳ ಚಿತ್ರಕಾಯ್ತು ಭಿತ್ತಿ
ಇದು ಹಸ್ತ-ಮಳೆಯ ಬಿಸಿಯುಸಿರು ಹಸಿರು ಅಲ್ಲಣ್ಣ ಕುರುಡು ಚಿತ್ತಿ.

ಇದು ಪ್ರಕೃತಿ-ಪುರುಷ. ಓ ಬ್ರಹ್ಮ–ಮಾಯೆ, ಅಲ್ಲಲ್ಲಿ ಶೈವ-ಭಕ್ತಿ.
ಮಾತೆ ಭಂಗಾರ, ಮಾತೆ ಸಿಂಗಾರ, ಮಾಟ ಕಾವ್ಯಯುಕ್ತಿ
ಎಲ್ಲಿಹುದು ಭಕ್ತಿ, ಅಲ್ಲಿಹುದು ಶಕ್ತಿ, ಬೇಕೇಕೆ ಒಣ ವಿರಕ್ತಿ
ಜ್ಞಾನಬೀಜದಲಿ ಚಿಗುರಿಬಂತು ಸಚ್ಚಿದಾನಂದ ಮುಕ್ತಿ.

ಭ್ರಾಂತಿಗೀಂತಿ ಹೊರಹೊಳಪು ತರದು ಇದು ಅಲ್ಲ ರಜತಶುಕ್ತಿ
ಇದು ನೇತಿಯಲ್ಲ ಇತಿ ಪ್ರೀತಿ ಸ್ವಾತಿ ಮೌಕ್ತಿಕದ ದೈವ ಭುಕ್ತಿ.

# ಒಲವೆಂಬ ಹೊತ್ತಿಗೆ

ಒಲವೆಂಬ ಹೊತ್ತಿಗೆಯನೋದ ಬಯಸುತ ನೀನು
ಬೆಲೆಯೆಷ್ಟು ಎಂದು ಕೇಳುತಿಹೆ ? ಹುಚ್ಚ !
ಹಗಲಿರುಳು ದುಡಿದರೂ, ಹಲಜನುಮ ಕಳೆದರೂ
ನೀ ತೆತ್ತಲಾರೆ ಬರಿ ಅಂಚೆವೆಚ್ಚ.

ಬೆವರ ಹನಿಯಲಿ ಹಲವು, ಕಣ್ಣೀರಿನಲಿ ಕೆಲವು
ನೆತ್ತರದಿ ಬರೆದುದಕೆ ಲೆಕ್ಕವಿಲ್ಲ,
ಚಿತ್ರ ಚಿತ್ರಾಕ್ಷರದ ಲಕ್ಷ ಪತ್ರಗಳುಂಟು;
ನಕ್ಷತ್ರ ಓದುತಿವೆ ಮರೆತು ಸೊಲ್ಲ.

ಏನಿಹುದೊ ಎಂತಿಹುದೊ ಸಂಸಾರಸಾರ!
ಕಂಡವರು ಯಾರದರ ಅಂತಪಾರ?
ಹೃದಯಸಂಪುಟದಲ್ಲಿ ಒಲವ-ಲೆಕ್ಕಣಿಕೆ
ಮಾಡಿ, ಬರೆಯೆಲೊ, ಹುಡುಗ, ನಿನ್ನ ಒಕ್ಕಣಿಕೆ.

—'ಉಯ್ಯಾಲೆ'ಯಿಂದ

# ಟಿಪ್ಪಣಿಗಳು*

## ಭಾಗ ಒಂದು: ಅನುರಾಗ ಗೀತಗಳು

ರಸಿಕಾ ಪೇಳೋ ! (ಪು. 21) : 'ಕಲ್ಯಾಣದ ಕಲ್ಯಾಣಿ' ಎಂಬುದು ಬೇಂದ್ರೆಯವರ ಒಂದು ಅಲಿಖಿತ ನಾಟಕ. ಆ ನಾಟಕದ ಕಲ್ಯಾಣಿ, ನಾಯಕನಾದ ಮುದ್ದಯ್ಯನಿಗೆ ಹೇಳಿದ ಮಾತು – ರಸಿಕಾ ಪೇಳೋ, ಕಲ್ಯಾಣಿಯ ಇನ್ನೊಂದು ಹಾಡು – 'ರಾಧೆಯ ಪಾಡು'.

ಕಬ್ಬಿನ ಗಣೆ, ಹುಬ್ಬಿನ ಗೆರೆ, ಬಿಲ್ಲ ಕಂಬಿ, ಹಲ್ಲ ಸಾಲು, ಚೆಂಬಾಳೆ ಮೈ, ಬಿಂಬಾಧರ, ಬಿದಿಗೆ ಚಂದ್ರಮ ಮತ್ತು ವಿಧಿಯಿತ್ತ ಕುಲದಲ್ಲಿ ಡೊಂಕುತನ ಎಂಬ ದೋಷ ಕಂಡರೂ ಇವುಗಳ ಹುಟ್ಟುಗುಣಗಳಾದ (ಅನುಕ್ರಮವಾಗಿ) ಹಾಲು, ನೋಟ, ಬಿಟ್ಟ ಬಾಣ, ಬಿದ್ದ ಕಿರಣ, ತಿರುಳು, ಚುಂಬನ, ಬೆಳುದಿಂಗಳು ಮತ್ತು ಪ್ರೀತಿಯಲ್ಲಿ ದೋಷವಿಲ್ಲ ಎಂದಿದ್ದಾಳೆ ಕಲ್ಯಾಣಿ. ತನ್ನ ಪ್ರೀತಿಯ ಶುದ್ಧ ಅಂತಃಕರಣವನ್ನು ವ್ಯಕ್ತಪಡಿಸುವುದೆ ಕಲ್ಯಾಣಿಯ ಉದ್ದೇಶ.

ರಾಗರತಿ (ಪು. 22) : ರಾಗರತಿಯ ಸಂಜೀರಿದ ಹಾಡು. ಸಾಯಂಕಾಲ ಒಬ್ಬ ಹೆಣ್ಣುಮಗಳು ಬಾವಿಗೆ ನೀರಿಗೆ ಹೋಗಿ ಮನೆಯತ್ತ ಮರಳುವ ಚಿತ್ರ. ಸಂಧ್ಯಾಕಾಲದ ಸಮಯವು ಇಂಥ ಸಂದರ್ಭದಲ್ಲಿ ಮನಸ್ಸಿನಲ್ಲಿ ಉಂಟುಮಾಡುವ ವಿಚಾರಗಳ ತಾಕಲಾಟವನ್ನು ಕವಿಯು ಉಪಮಾ, ಉತ್ಪ್ರೇಕ್ಷೆಗಳಿಂದ ವರ್ಣಿಸಿದ್ದಾನೆ. 'ಕಾಮಿ' ಬೆಕ್ಕು–ಬೆಕ್ಕು.

ಚೆಲುವ (ಪು. 22) : ಕೃಷ್ಣನಂಥ ಮುದ್ದಾದ ತರಳನನ್ನು ಕಂಡು ಗೋಪಿಯು ವಾತ್ಸಲ್ಯದಿಂದ ಬಂದ ಹಾಡು. ವೃಂದಾವನಕ್ಕೆ ಹೋದಾಗ ಬರೆದದ್ದು. ಬೇಂದ್ರೆಯವರ ಮಗ – ಪಾಂಡುರಂಗ ಚಿಕ್ಕವನಿರುವಾಗ ಅವನ ಬಾಲಲೀಲೆಯನ್ನು ಕಂಡಾಗ ಬೇಂದ್ರೆಯವರಲ್ಲಿಯೆ ಉದ್ಭವಿಸಿದ ವಾತ್ಸಲ್ಯ ಭಾವವಿದು. ಈ ವಾತ್ಸಲ್ಯದ ಜಾತಿ–ಗೋಪಿಯ ರೀತಿಯದು ಎಂದು ಅವರು ಕಂಡಿದ್ದಾರೆ.

ಹರಕೆ (ಪು. 26) : ಕಾಮವೂ ಕಸ್ತೂರಿಯಂತೆ ಒಕ್ಕಾಲು ಮದ, ಮುಕ್ಕಾಲು ಮಣ್ಣು. ಆದರೂ ಮಗಮಗಿಸುವ ಸವಿಗಂಪು ! ಕಾಮ–ಪ್ರೇಮ, ಕೆಸರು-ಕಮಲ ಇದ್ದಂತೆ. ಒಂದು ವಾಚ್ಯ, ಒಂದು ಧ್ವನಿ ಕಾವ್ಯದ ಭಾಷೆಯಲ್ಲಿ.

---

* [ಈ ಭಾವಸಂದರ್ಭ ಟಿಪ್ಪಣಿಗಳನ್ನು ಬರೆಯುವಾಗ ಬೇಂದ್ರೆಯವರು ಬರೆದು

'ಹರಕೆ' ಎಂಬ ಈ ಕವನದಲ್ಲಿ ವಿಪ್ರಲಂಭ ಶೃಂಗಾರದ ಅವಸ್ಥೆಯಲ್ಲಿರುವ ನಾಯಕ ತನ್ನ ನಾಯಿಕೆಗೆ ಚಂದ್ರಮ ಮತ್ತು ಚಿಕ್ಕೆಗಳ ಕಾವಲವಿರಲಿ ಎಂದು ಆಶಿಸುತ್ತಾನೆ. 'ನವೋನವ ಮನೋರಥ ಸಫಲ ಪ್ರೊಸ ಬಸಂತ' ಬರುವವರೆಗೂ ಹಾದಿ ಕಾಯುವ ತಾಳ್ಮೆ ಇಲ್ಲಿಯ ನಾಯಕನಿಗೂ ಇದೆ.

ವಾರಿನೋಟ (ಪು. 28) : ವಾರಿನೋಟ ಎಂಬುದು ಒಂದು ಕಾಮಸಂಕೇತ. ವಾರಿನೋಟ ಬೀರುವವರು ಹೊಳಿಯ ದಂಡೆಯ ಮೇಲೆ ಮತ್ತು ವಾರಿನೋಟ ನೋಡು ವವರು ಹೊಳಿಯಲ್ಲಿ ಇದ್ದಾಗ, ಅವರಲ್ಲಿ ಪರಸ್ಪರ ಆಕರ್ಷಣೆಯ ರೀತಿ ಹೇಗಿರುತ್ತದೆ ಎಂಬುವನ್ನು 'ಸೂಜಿಗಲ್ಲು ತಿರುಗುತ್ತಿತ್ತೋ ಹೊಳಿಮ್ಯಾಗ – ಸೂಜಿಯೊಂದು ತೇಲುತಿತ್ತೊ ಹೊಳಿಯಾಗ' ಎಂಬ ಸಾಲುಗಳು ಪ್ರತಿನಿಧಿಸುತ್ತವೆ. ಹೊಳೆ, ನಾಯಕ ಮತ್ತು ನಾಯಿಕೆ ಯರನ್ನು ಅಗಲಿಸಿದೆ. ಅಗಲಿಕೆಯಲ್ಲಿಯ ರಸಿಕತೆ ಇಲ್ಲಿ ಮೂರ್ತಗೊಂಡಿದೆ.

ಕಾಮಕಸ್ತೂರಿ (ಪು. 28) : ನಾಯಕನು ಪ್ರೀತಿಯಿಂದ ಕಾಮಕಸ್ತೂರಿಯ ತೆನಿ ಯೊಂದನ್ನು ನಾಯಿಕೆಗೆ ಮುಡಿಸಿ, ಅದರ ಸುಖಸ್ಪರ್ಶ ತನ್ನನ್ನು ಯಾವ ಲೋಕಕ್ಕೆ ಒಯ್ಯಬಹುದು ಎಂಬುದನ್ನು ಕಲ್ಪಿಸಿದ್ದಾನೆ. ಪ್ರತ್ಯಕ್ಷದಲ್ಲಿ ನಾಯಿಕೆಯೆ ಅಲ್ಲಿಲ್ಲ. ಇನ್ನೊಬ್ಬರು ಏನಂದಾರು ಎಂಬ ಭಯವೂ ನಾಯಕನಿಗೆ ಇಲ್ಲ. ಅಭಯವೆ ಕಾಮದ ಶುದ್ಧ ಸ್ವರೂಪ.

ಬಡವರ ಮಗಳು (ಪು. 30) : ನಾಯಕನಿಗೆ ತನ್ನ ನಾಯಿಕೆಯ ಡೌಲಿನ ನೆನೆ ಪಾಗುತ್ತದೆ. ಕಣ್ಣು ಮುಚ್ಚಿ ಅವಳ ರೂಪವನ್ನು ನೋಡಲೆತ್ನಿಸಿದಾಗ, ತನ್ನ ನಾಯಿಕೆಯ ಗಂಭೀರ ಮುದ್ರೆ ಗೋಚರವಾಗುತ್ತದೆ. ಅವಳ ಹಸನ್ಮುಖವನ್ನು ಕಾಣುವ ನಾಯಕನ ಬಯಕೆ ಇಲ್ಲಿ ವ್ಯಕ್ತವಾಗಿದೆ.

---

ಪ್ರಕಟಿಸಿದ ಭಾವಸಂದರ್ಭ ಟಿಪ್ಪಣಿಗಳನ್ನು ಉಪಯೋಗಿಸಿಕೊಂಡಿದ್ದೇನೆ. 'ಒಲವೆ ನಮ್ಮ ಬದುಕು' ಸಂಗ್ರಹದೊಳಗಿನ ಕವನಗಳನ್ನು ಓದಿದಾಗ ನನ್ನಲ್ಲಿ ಉದಿಸಿದ ಭಾವಗಳನ್ನು ಕವನಸಂದರ್ಭಕ್ಕೆ ಅನುಲಕ್ಷಿಸಿ ನನ್ನ ಟಿಪ್ಪಣಿಗಳನ್ನು ಸಿದ್ಧಪಡಿಸಿದ್ದೇನೆ.

ಟಿಪ್ಪಣಿಗಳನ್ನು ಬರೆಯುವ ಅವಕಾಶವನ್ನು ನನಗೆ ಕಲ್ಪಿಸಿಕೊಟ್ಟದ್ದಕ್ಕಾಗಿ ಪ್ರಾಚಾರ್ಯ ಕು. ಶಿ. ಹರಿದಾಸ ಭಟ್ಟ ಅವರಿಗೆ ನಾನು ಆಭಾರಿಯಾಗಿದ್ದೇನೆ. ಕವನಗಳ ಆಯ್ಕೆ ಮಾಡಿ, ವಿಭಜಿಸಿ, ಪೀಠಿಕೆಗಳನ್ನು ಬರೆದ ಶ್ರೀ ಬನ್ನಂಜೆ ಮತ್ತು ಶ್ರೀ ನಿ. ಶ್ರೀಶ ಬಲ್ಲಾಳ ಅವರಿಗೂ ನನ್ನ ಗೌರವಪೂರ್ವಕ ನಮನಗಳು. ಕವನಸಂಗ್ರಹಕ್ಕೆ ಯುಕ್ತವಾದ ರೇಖಾಚಿತ್ರಗಳನ್ನು ಬರೆದುಕೊಟ್ಟ ಶ್ರೀ ಕೃಷ್ಣ ಹೆಬ್ಬಾರ ಅವರಿಗೆ ನನ್ನ ವಂದನೆ. –ಸಂ. ವಾ. ದು.]

ನನ್ನವಳು (ಪು. 31) : ಸಂಜೆ, ರಾತ್ರಿ ಮತ್ತು ನಸುಕು ಇವು ಶೃಂಗಾರರಸದ ಉದ್ದೀಪನ ವಿಭಾವಗಳು. ಈ ವಿಭಾವಗಳ ಮೂಲಕ ವಿರಹಿಯಾದ ನಾಯಕನಿಗೆ ನಾಯಿಕೆಯು ನೆನಪಾಗಿದೆ.

ಅವನು–ಅವಳು (ಪು. 32) : ನಾಯಕ ನಾಯಿಕೆಯರ ಕಾಲ್ಪನಿಕ ಭೆಟ್ಟಿಯಾಗಿದೆ. ಪ್ರತ್ಯಕ್ಷ ಭೆಟ್ಟಿಯಲ್ಲಿಯೂ ಶೃಂಗಾರ ನಾಯಕ ನಾಯಿಕೆಯರಲ್ಲಿ ಮಾತಿಗೆ ಗೌಣಸ್ಥಾನ, ಸಂಕೇತಗಳಿಗೇ ಪ್ರಾಧಾನ್ಯ ಹೆಚ್ಚು ಎಂಬುದನ್ನು ಇಲ್ಲಿ ಪ್ರತಿಬಿಂಬಿಸಲಾಗಿದೆ.

ಕತ್ತಲೋ ಕತ್ತಲು (ಪು. 33) : ವಿರಹಿಯ ಕಾಮವಿಕಾರವು ಅವನ ಮನಸ್ಸಿಗೆ ಮುಂಗುರುಡನ್ನು ತಂದು 'ಗುರಿಯಿರದ ಬಾಣದಂತೆ' ಅವನನ್ನು ಹೊಯ್ದಾಡಿಸುತ್ತದೆ. ಅವನಿಗೆ ಬೆಳಕಿಗಿಂತ ಕತ್ತಲೆಯ ಭಾವನೆಯೆ ಹೆಚ್ಚಾಗಿ ಅನುಭವಕ್ಕೆ ಬರುತ್ತದೆ. ಇದು ಕಾಮವಿಕಾರದ ಬಗೆ. ಪ್ರೇಮ ಪ್ರಕಾರವೂ ಹೀಗೆಯೇ !

ಬರಿಗೊಡದ ಬಾಲಿ (ಪು. 34) : ನಾಯಿಕೆಯು ಮುಗ್ಧಾವಸ್ಥೆಯನ್ನು ದಾಟಿ ಯೌವನಾವಸ್ಥೆಗೆ ಬಂದಿದ್ದಾಳೆ. ಎರಡೂ ಅವಸ್ಥೆಗಳ ತುಲನಾತ್ಮಕ ಅನುಭೂತಿ ಇಲ್ಲಿದೆ.

ನೀರಿಗೆ ನಡೆದಾಗ (ಪು. 36) : ತಾರುಣ್ಯ ಕಳೆದುಕೊಂಡ ನಾಯಿಕೆ, ತನ್ನ ತಾರುಣ್ಯದ ಸುಖದುಃಖವನ್ನು ನೆನೆಸಿ; ದುಃಖಭಾಗವನ್ನು ಹರಿಯುವ ನೀರಿನಲ್ಲಿ ಕಣ್ಣೀರು ಮುಖವಾಗಿ ಸೇರಿಸಲು ಬಯಸುತ್ತಾಳೆ. ಹರಿಯುವ ನೀರು ತನ್ನ ದೂತನಾಗಿ ಹರನತ್ತ ಹರಿಯುತ್ತ ಹೋಗಿ ತಮ್ಮ ದುಃಖವನ್ನು ನಿವೇದಿಸಬಹುದು ಎಂಬ ಆಸೆ ಇಲ್ಲಿಯ ನಾಯಿಕೆಗೆ ಇದೆ.

ಅಕ್ಕರತಿ (ಪು. 37) : ಮನುಷ್ಯರು, ಪಶು ಮತ್ತು ಪಕ್ಷಿ–ಎಲ್ಲರಲ್ಲಿಯೂ ಇರುವ ಅಕ್ಕರತಿ ಒಂದೇ ಜಾತಿಯದು. ಅಂತಃಕರಣ ಎಂಬುದು ಅಂತರಂಗದ ವಿಷಯ. ಅದಕ್ಕೆ ದೂರ, ಸಮೀಪ ಎಂಬ ಅಳತೆ ಅಡ್ಡಿಯಾಗಿ ನಿಲ್ಲಲಾರವು.

ಜನುಮದ ಜಾತ್ರಿ (ಪು. 38) : ನಲ್ಲನಲ್ಲೆಯರ ಜೀವನದ ದಿನದಿನವು ಜಾತ್ರಿಯ ಸಡಗರ, ಸಂಭ್ರಮಗಳಿಂದ ಕೂಡಿರಲಿ ಎಂಬುದು ಈ ಕವನದ ಆಶಯ. 'ಸಾವಿರಕ ಒಬ್ಬ ನೋಡವ್ವ ನನ ನಲ್ಲ' ಎಂದು ನಲ್ಲೆ ತನ್ನ ಗೆಳತಿಗೆ ಹೇಳುವಲ್ಲಿ ಅವಳ ಜೀವನದ ಸಾಫಲ್ಯ ಅಡಗಿದೆ.

ಒಲವೆಂಬ ಕಿಚ್ಚು (ಪು. 40) ; ವಿರಹ ಎಂಬುದು ಒಲುಮೆಯ ಕಿಚ್ಚು. ಈ ಕಿಚ್ಚಿನಲ್ಲಿ ಬಾಳಿ ಬದುಕುವುದೆ ನಿಜವಾದ ಪ್ರೀತಿಯ ಸಾಮರ್ಥ್ಯ ಎಂದು ಇಲ್ಲಿ ಸೂಚಿಸಲಾಗಿದೆ.

ಗಿಣಿ ಹೇಳ ! (ಪು. 41) : ಗಿಣಿಯೂ ಒಂದು ಶೃಂಗಾರ ಸಂಕೇತ. ಗಿಣಿಯೊಂದಿಗೆ ಮಾತನಾಡುವುದು ಒಂದು ಬಗೆಯ ಶೃಂಗಾರಚೇಷ್ಟೆ. ವಿರಹಿಣಿಯು ತನ್ನ ಮನವೆಂಬ ಗಿಣಿಯೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದರ ಚಿತ್ರ ಇದು.

ಕಂಡ ತಪ್ಪು (ಪು. 42) : ನಾಯಕ ಮತ್ತು ನಾಯಿಕೆ ಇವರ ಒಂದು ಕ್ಷಣದ ಭೆಟ್ಟಿ ಅವರನ್ನು ಪರಸ್ಪರ ಪರವಶರನ್ನಾಗಿ ಮಾಡಿಬಿಡುತ್ತದೆ. ಪರವಶತೆಯ ಏಳು-ಬೀಳುಗಳ ಚಿತ್ರಣ ಇಲ್ಲಿದೆ.

ಚಿತ್ರ (ಪು. 43) : ಕೈಗಲ್ಲ, ಹುಬ್ಬುಗೆಯ್ಯು, ಗದ್ದಬೆರಳು, ತೆರೆದ ತೋಳು, ನಗುವು ಬಿಕ್ಕು ಇವು ಶೃಂಗಾರ ಸ್ಮರಣೆಯ ಸಂಕೇತಗಳು. ಸಂಕೇತಗಳ ರೇಖಾಚಿತ್ರವನ್ನು ಇಲ್ಲಿ ಮೂಡಿಸಲಾಗಿದೆ.

ಮಾಯಾ ಕಿನ್ನರಿ (ಪು. 44) : ಈ ಕವನದ ಹಿನ್ನೆಲೆಗೆ ಒಂದು ಕಥೆ ಇದೆ. ಕಾಡಸಿದ್ಧ ಮರುಳಸಿದ್ಧ ಎಂಬ ಮಹಾತ್ಮರೊಬ್ಬರು ಉತ್ತರ ದಿಗ್ವಿಜಯ ತೀರಿಸಿ ದಕ್ಷಿಣದಲ್ಲಿ ಕರ್ನಾಟಕಕ್ಕೆ ಬಂದರು. ಆಗ ಕೊಲ್ಲಾಪುರದ ಮಾಯೆ ಎಂಬ ಯೋಗಿನಿಯು ಸಾವಿರ ಯೋಗಿಗಳನ್ನು ಸೋಲಿಸಿ ತನ್ನ ಮನೆಯಲ್ಲಿ ಊಳಿಗದಾಳುಗಳನ್ನಾಗಿ ಕೆಲಸಕ್ಕೆ ಹೂಡಿದುದನ್ನು ಕೇಳಿದರು. ಮಾಯೆಯೊಡನೆ ಇವರ ವಾಗ್ವಾದವು ಅನೇಕ ದಿನ ನಡೆದು ಮಾಯೆಯು ಎಲ್ಲ ವಿಷಯದಲ್ಲಿ ಸಿದ್ಧರಿಗೆ ಸೋತಳು. ಆದರಿಂದ ಅವಳು ಕುಪಿತಳಾಗಿ ಮಂತ್ರ ತಂತ್ರದಿಂದಾದರೂ ಅವರನ್ನು ಗೆಲ್ಲಲು ಹವಣಿಸಿದಳು. ಸಿದ್ಧರು ಮಾಯೆಯನ್ನೆ ಮಂತ್ರಬಲದಿಂದ ಕಿನ್ನರಿಯನ್ನಾಗಿ ಮಾಡಿ ಹೊತ್ತುಕೊಂಡು ಹೊರಟರು. ಮೊದಲ ಸಲ ಆ ಕಿನ್ನರಿಯನ್ನು ಬಾರಿಸಬೇಕೆಂದಾಗ ಪ್ರಣಯಕುಪಿತ ಮಾನಿನಿಯಂತೆ ಅದು ಸಿಡಿಮಿಡಿಗೊಂಡಿತು. ಶ್ರುತಿಗೊಡಲಿಲ್ಲ. ಆಗ ಸಿದ್ಧರು ಮಾನಿನಿಯನ್ನು ಒಲಿಸಿಕೊಳ್ಳುವಂತೆ ಮಾಯೆಯನ್ನು ಒಲಿಸಿಕೊಳ್ಳಲು, ಗೆಜ್ಜೆ-ಪೈಜಣ ಕಟ್ಟಿದ ಮಾಯೆಯೆ ಕಿನ್ನರಿಯ ಮೈಯಲ್ಲಿ ನಿಂತು ಜಗವು ಬೆರಗಾಗುವಂತೆ ದಿವ್ಯಸಂಗೀತವನ್ನು ಹೊರಸೂಚಿಸಿದಳು.

ಈ ಊಹಾತೀತದಲ್ಲಿ-ಗುಂಗಿಯ ಹುಳಧಾಂಗ ಗೊಣಗುಟ್ಟು, ಕುನ್ನಿ ಕುಂಯ್‌ಗುಡುವಾಟ, ಮತ್ತಿಷ್ಟು ಮುತ್ತಿಟ್ಟು, ತುಟಿ ಕಚ್ಚಿ ತಡವರಿಸಿ, ಮೊದಲಾದ ಶಬ್ದಪುಂಜಗಳು ಬಾಹ್ಯ ಸಂಭೋಗದ ಸಂಕೇತಗಳಾಗಿವೆ; 'ಸಕ್ಕರಿ ಬೆರೆಧಾಂಗ ಹಾಲಾಽಗ' ಎಂಬಲ್ಲಿ-ಸಂಭೋಗ ಸಂಕೇತವು ಒಡಮೂಡಿದೆ. ಬಾಹ್ಯ ಸಂಭೋಗ ಮತ್ತು ಸಂಭೋಗ ಇವುಗಳ ಅನುಭವವು- ಜುಮುಜುಮು, ರುಮುಝುಮು, ಗುಂಗುಣು, ದುಮುದುಮು, ಗುಜುಗುಜು, ಗುಲುಗುಲು, ರೊಯ್‌ಬಿಲ್ಲಪಟ, ಯಾತ ಕಿರುಗುಟ್ಟೋದು ನಿಂಧಾಂಗ ಎಂಬಂತೆ ತನ್ಮಯತೆ ಮತ್ತು ತಲ್ಲೀನತೆಯಿಂದ ಕೂಡಿರುತ್ತದೆ. ಇಲ್ಲಿಯ ಬಾಹ್ಯ ಸಂಭೋಗ ಮತ್ತು ಸಂಭೋಗಗಳು ಆಧ್ಯಾತ್ಮಿಕ ನೆಲೆಯವು.

**ಪೋರಿಪೋರ (ಪು. 47) :** ಯೌವನದ ಸಹಜಾಕರ್ಷಣೆಯಲ್ಲಿ ಒಂದು ನಿಸರ್ಗದ ಸಂಯಮಾತೀತ ಆವೇಗವಿದೆ. ಈ ಪ್ರಾಣಧರ್ಮ ಒಂದು ಮನೋಧರ್ಮವಾಗಿ ಕಂಡಾಗ ಆ ಭಾವಕ್ಕೆ ಒಂದು ಅವ್ಯಾಜ ಮನೋಹರತೆ ಬರುವುದು.

ಬಾಳು ಸುಳ್ಳಾಟವಲ್ಲ. ಬಾಳಿನಷ್ಟು ಸತ್ಯವಾದ ಆಟ ಇನ್ನೊಂದಿಲ್ಲ. ಈ ಆಟಕ್ಕೆ ಹೆದರಬೇಕಾಗಿಲ್ಲ. ಇಂಥ ಮನೋಧೈರ್ಯ ತರುಣ–ತರುಣಿಯರಲ್ಲಿ ಬರಬೇಕಾಗಿದೆ.

**ನಾನು ಬಡವಿ (ಪು. 48) :** ಬೇಂದ್ರೆಯವರು ಜೇಲುವಾಸ ಅನುಭವಿಸಿ, ಅನಂತರ ದಲ್ಲಿ ಪೋಲೀಸ ಕಾವಲದ ಮಧ್ಯದಲ್ಲಿ ಕೆಲವು ದಿವಸ ಮುಗದ ಎಂಬ ಹಳ್ಳಿಯಲ್ಲಿ ವಾಸ ಮಾಡಿದರು. ಆಗ ಅವರು ಅನುಭವಿಸಿದ ಬಡತನದ ಅನುಭೂತಿ ಇಲ್ಲಿ ಒಂದು ನಾಟ್ಯ ಗೀತವಾಗಿದೆ. ಹಣದಿಂದ ಬಡತನ ಬಂದರೂ, ಪತಿ-ಪತ್ನಿಯರಲ್ಲಿಯ ಪ್ರೀತಿಗೆ ಬಡತನ ಬರದಿದ್ದರೆ ಸಾಕು. ಅದು ಅಕ್ಷಯ ಶ್ರೀಮಂತಿಕೆ.

**ಹಾಡು-ಪಾಡು (ಪು. 50) :** ಕಾಮದ ಬಳ್ಳಿ ಅಂತರಂಗದಲ್ಲಿಯೂ, ಬಹಿರಂಗ ದಲ್ಲಿಯೂ ಹಬ್ಬಿದೆ. ಬಹಿರಂಗದ ಬಳ್ಳಿ, ಗೋಳಾಟವನ್ನು ತಡೆದು, ಅಂತರಂಗದಲ್ಲಿ— ಹೂ, ಕಾಯಿ, ಹಣ್ಣು ಎಂಬ ಅವಸ್ಥೆಗಳನ್ನು ಪಡೆದು, ರಸದುಂಬಲಿ ಎಂದು ಕವಿ ಆಶಿಸಿ ದ್ದಾನೆ. ಅಂತರಂಗದ ಕಾಮದ ರಸದುಂಬಿಯಾಗಿ ಅದು ಒಲವಿನ ಹಾಡಾಗುತ್ತದೆ. ಅದು ವ್ಯಕ್ತಿತ್ವದ ಪಾಡು ಸ್ಥಿತಿ.

**ನರಕದಲ್ಲಿ ಸ್ವರ್ಗ (ಪು. 51) :** ಸ್ವರ್ಗ ಮತ್ತು ನರಕ ಇವು ಸುಖದುಃಖದ ಸಂಕೇತಗಳು. ಯಾವುದು ನಾವು ಸ್ವರ್ಗ ಎಂದು ತಿಳಿಯುತ್ತೇವೆಯೊ ಅದು ಒಮ್ಮಿಂದೊಮ್ಮೆ ನರಕವಾಗಿಬಿಡುತ್ತದೆ – 'ಅಹ ಸ್ವರ್ಗವೆ ಎಂದೆ, ನರಕ ತೆರೆಯೆ'. ಇದರಂತೆಯೆ ನರಕ–ದುಃಖ ಎಂದು ಭಾವಿಸಿದ್ದೇ ಸ್ವರ್ಗ-ಸುಖವಾಗಿಯೂ ಒಮ್ಮೊಮ್ಮೆ ಪರ್ಯವಸಾನಗೊಳ್ಳುತ್ತದೆ. ಇದಕ್ಕೆ ದೈವ, ವಿಧಿ ಎಂಬ ಹೆಸರುಗಳನ್ನು 'ಪರಾವಲಂಬಿ'ಗಳು ಕೊಡುತ್ತಾರೆ.

**ಓಂ ಸ್ವಾಗತಮಕ್ಕೆ (ಪು. 52) :** ಸೂರ್ಯನ ಕಿರಣವು ಆಕಾಶದಿಂದ ಭೂಲೋಕಕ್ಕೆ ಅವತರಿಸುತ್ತದೆ. ಆವರಣವನ್ನು ಪತನ ಎಂದು ಮೂಢರು ಕರೆಯುತ್ತಾರೆ. ಪತಿತೋದ್ಧರಣವೇ ಅವತರಣದ ಕಾರ್ಯ ಎಂಬ 'ಒಳ ಬಲ್ಲವನೆ ಶರಣ'. ಈ ಪತಿತ ಭಾವ ವ್ಯಕ್ತಿಯಲ್ಲಿ ಯಾವಾಗಲೂ ಉಳಿಯುವುದಿಲ್ಲ. ಅದರ 'ಉರಿ ಆರಿನಂದ', ಅದನ್ನು ಮತ್ತೆ ಹೊತ್ತಿಸಲು ಮಿಂಚಿನ ಪ್ರಕಾಶ ಶಕ್ತಿ ಆವರಿಸುತ್ತದೆ. ಅದಕ್ಕೆ ಸ್ವಾಗತದ ಆಮಂತ್ರಣ ಬೇಕು.

**ಎರಡು ನಕ್ಷತ್ರ (ಪು. 54) :** ಆಕಾಶದಲ್ಲಿ ಬೆಳಗುವ ಚಿಕ್ಕೆ ಒಂದು ನಕ್ಷತ್ರ. ಅದರ

ರೂಪವನ್ನು ಪ್ರತಿಬಿಂಬಿಸಿಕೊಳ್ಳುವ ಕಣ್ಣು ಇನ್ನೊಂದು ನಕ್ಷತ್ರ. ಈ ಎರಡು ನಕ್ಷತ್ರಗಳ ನಡುವೆ ನಡೆಯುವ ಆದಾನ-ಪ್ರದಾನದ ಅನುಭವ ಗೀತವಿದು.

ಅಪರೂಪ ರಾಗ (ಪು. 55) : ಈ ಕವನದ ಧಾಟಿ ಮತ್ತು ಪಲ್ಲವಿ ಬೇಂದ್ರೆಯವರ ಕನಸಿನಲ್ಲಿ ರೂಪಗೊಂಡವು. ಕನಸಿನ ಭಾವವನ್ನು ಭಾವಗೀತದಲ್ಲಿ ಸೆರೆಹಿಡಿಯುವ ಪ್ರಯತ್ನದ ಫಲ ಇದು.

ಸೌಂದರ್ಯ ಎಂಬುದು ಕಾಮರೂಪ. ಅದಕ್ಕೆ ಹೆಸರು, ಮೈ ಎಂಬ ಬಂಧನಗಳಿಲ್ಲ. ಅದು ಬಾನಗೆರೆಯಾಗಿ, ಹಾಳಿಪಟವಾಗಿ ತೇಲಾಡುತ್ತದೆ. ಬಾನಗೆರೆ ಮತ್ತು ಹಾಳಿಪಟ ಎಂಬಿವು ಕನಸಿಗೆ, ಕವಿ ಮಾಡಿಕೊಂಡ ಸಂಕೇತ ಎಂದೂ ಹೇಳಬಹುದು. ಭೂಮಿಗೆ ಅಂಟಿಕೊಂಡ ಕವಿಗೆ ಸೌಂದರ್ಯವು (ಚೆಲುವು) ತನ್ನ ರೂಪವನ್ನು ತೋರಿ ಕವಿಯೂ ತನ್ನಂತೆ ಆಗಸಕ್ಕೇರಲಿ ಎಂದು ಇಲ್ಲಿ ಸೂಚಿಸಿದಂತಿದೆ.

ದವನ-ಕವನ (ಪು. 56) : ದವನ ಒಂದು ಹಾವ-ಉದ್ದೀಪನ ವಿಭಾವ. ಉದ್ದೀಪ್ತನಾದ ಕವಿ ತನ್ನಲ್ಲಿ ಮೂಡಿದ ಭಾವವನ್ನು ಕವನವನ್ನಾಗಿ ಪೋಣಿಸುತ್ತಾನೆ. ದವನ-ಕವನ ಬಾಡಬಹುದು (ಹಳೆಯದಾಗಬಹುದು), ಆದರೆ ಅವುಗಳ ಕಂಪಿಗೆ ಮತ್ತು ಇಂಪಿಗೆ ಮರಣವಿಲ್ಲ ಎಂಬ ಅನಿಸಿಕೆಯ ಕಥನ ಕವನ ಇದು.

ಗಮಗಮಾ ಗಮಾಡಸತಾವ ಮಲ್ಲಿಗಿ (ಪು. 58) : 'ದವನದ ಹುಣ್ಣಿಮೆಯ ಜಾತ್ರೆಯ ರಾತ್ರಿ' (ಹಾಡು-ಪಾಡು) ಎಂಬ ಜಾತಿಯ ಕವನ ಇದು. ಗೀತ ಕಥೆಯಲ್ಲಿ ಬರಬೇಕಾದ ಹಾಡು. ಗಮಗಮಾ ಸುವಾಸನೆಯನ್ನು ಕೊಟ್ಟು, ಮಲ್ಲಿಗೆಯ ಮೊಗ್ಗೆಗಳನ್ನು ಅರಳಿಸಿ, ಮನಸ್ಸನ್ನು ಮರುಳುಗೊಳಿಸಿದ ಮಾರುತ ತನ್ನನ್ನು ಬಿಟ್ಟು ಬೇರೆಡೆಗೆ ಹೊರಟನೋ ಎಂಬ ಭಯ, ವಿಹ್ವಲತೆ ಈ ಕವನದಲ್ಲಿ ರೂಪಗೊಂಡಿದೆ.

ಗೆಳತಿ (ಪು. 60) : ಗಿಳಿ, ಅಳಿ, ಕೋಗಿಲ, ಋತುರಾಜ ವಸಂತಮಾಸದ ಆಗಮನಕ್ಕೆ ಉಗ್ಗಡಣೆಯನ್ನು ಸಲ್ಲಿಸುವ ಸ್ತುತಿಪಾಠಕರು. ಮಾವು ಹೂವಾಗುವುದು, ಬೇವು ಸವಿಯಾಗುವುದು ನಿಸರ್ಗ ಧರ್ಮ. ಹಾಗೆಯೆ ಗೆಳೆಯ-ಗೆಳತಿ ಇವರ ಸಮ್ಮಿಲನವು ಪ್ರಕೃತಿ ಧರ್ಮ.

ಹೂಂ-ಊಂಹೂ (ಪು. 61) : ಒಂದು ನಾಟಕೀಯ ಪ್ರಣಯ ಗೀತ. ಹೂ ಮತ್ತು ಹೂಂ ಒಪ್ಪಿಗೆಯ ಸಂಕೇತ. ಊಂಹೂಂ ನಿಷೇಧ ಸಂಕೇತ. ಹೂ ಎಂಬುದು ಸಮ್ಮಿಲದ ಸುಖ. ಊಂಹೂಂ ಎಂಬುದು ಅಗಲಿಕೆಯ ಶೂನ್ಯಭಾವ. 'ಅಣಗಿಸುತಿವೆ ಒಣಗಿದ ಹೂವು, ಎಲ್ಲಿರುವುದು ಆಗಿನ ಹೂಹೂ' ಎಂಬ ಸ್ಮರಣೆ ಗೀತವಾಗಿದೆ.

ಕನ್ಯಾರತ್ನ (ಪು. 62) : ಕನ್ಯೆಯಲ್ಲಿರುವ ಪ್ರೀತಿಗೆ-ಪ್ರೌನ, ವಿನಯ, ಭಯದ ಮುದ್ರೆ ಸಹಜ. ನಯ ಮೊದಲಾದ ಮುಖಗಳಿರುತ್ತವೆ. ಈ ಗುಣಮುಖಿಗಳೆ ಅವಳನ್ನು ರತ್ನಪ್ರಾಯವಾಗಿ ಮಾಡಬಲ್ಲವು.

## ಭಾಗ ಎರಡು : ವಿರಹಗೀತಗಳು

ಕೃಷ್ಣಾಕುಮಾರಿ (ಪು. 65) : 1922ರಲ್ಲಿ ಪ್ರಕಟವಾದ ಬೇಂದ್ರೆಯವರ ಮೊದಲ ಕೃತಿ. ಇದರಲ್ಲಿ 27 ವಾರ್ಧಕಷಟ್ಪದಿ ಪದ್ಯಗಳಿವೆ. ಬೇಂದ್ರೆಯವರ ಕವಿಲಕ್ಷ್ಮೀಶ-ಪ್ರೀತಿಯ ಸಂಕೇತವಾಗಿ ಅವರ ಈ ಪ್ರಥಮ ಕೃತಿ 'ಕವಿ-ಲಕ್ಷ್ಮೀರಮಣನಾಸ್ಯಚಂದ್ರ'ನಿಗೆ ಅರ್ಪಿತವಾಗಿದೆ.

ಇದೊಂದು ಕಥನ ಕವನ. ಇದರ ಹಿನ್ನೆಲೆಗೆ ಇರುವ ಕಥಾಸಾರಾಂಶವು ಹೀಗಿದೆ— ರಜಪೂತ ರಮಣಿಯರ ಲಾವಣ್ಯತೆಗೆ ಬಿಟ್ಟ ಒಂದೇ ಒಂದು ಹೂವಿನಂತಿರುವ ಕೃಷ್ಣಾ ಕುಮಾರಿಯು ಲಾವಣ್ಯ ಪರಿಮಳದಿಂದ ದಿಕ್ಕುದಿಕ್ಕಿನ ರಾಜಮಧುಪರ ಮನಸ್ಸು ಭ್ರಮಿಸ ಹತ್ತಿತ್ತು. ಇವಳ ತಂದೆಯಾದ ಉದಯಪುರದ ಭೀಮಸಿಂಹನು ಈ ಲಾವಣ್ಯಾಕ್ಷಿಯನ್ನು ಜೋಧಪುರದ ಭೂಲಕ್ಷ್ಮೀವಲ್ಲಭನಾದ ಯೋಧಾಗ್ರಣಿಗೆ ಕೊಡಬೇಕೆಂದು ಮೊದಲೇ ಗೊತ್ತುಮಾಡಿದ್ದರು. ಇವನನ್ನೇ ಕುಮಾರಿಯೂ ಪ್ರೀತಿಸುತ್ತಿದ್ದಳು. ಆದರೆ, ವಿಧಿ ಮಾತ್ರ ಬೇರೆ ವಿಧವಾಗಿತ್ತು.

ಅಕಸ್ಮಾತ್ತಾಗಿ ಈ ಜೋಧಪುರದರಸು ಸಾಯಲು, ಅನೇಕ ಅರಸರ ಮನಸ್ಸಿನಲ್ಲಿ ಮನಸಿಜನ ದಾಳಿಯೆದ್ದಿತು. ಜಯಪುರದ ಜಗತ್‌ಸಿಂಹನು ಖಡ್ಗಧಾರಿಗಳೊಡನೆ ಪ್ರಣಯ ಪತ್ರಿಕೆ ಕಳಿಸಿ, ಭೀಮಸಿಂಹನಿಂದ ವಿವಾಹಕ್ಕೆ ಒಪ್ಪಿಗೆ ಪಡೆದುಕೊಂಡನು. ಜೋಧಪುರದ ಅರಸನ ತರುವಾಯ ಅವನ ಭೂಲಕ್ಷ್ಮಿಗೆ ಒಡೆಯನಾದ ತಾನು ಸ್ತ್ರೀಲಕ್ಷ್ಮಿಗೂ ಒಡೆಯನೆಂದು ಬಗೆದು ಮಾನಸಿಂಹನು ಕುಮಾರಿಗೆ ತಾನೇ ವರನೆಂದು ಹೇಳಿಕಳಿಸಿದನು. ಅವಾಸ್ತವ ಮಹತ್ವಾಕಾಂಕ್ಷಿಯಾದ ಸಿಂಧಿಯನು ಯಾವ ಕುಟಿಲ ನೀತಿಗಾಗಿಯೋ ಮಾನಸಿಂಹನ ಹಂಬಲಕ್ಕೆ ಬೆಂಬಲ ಕೊಟ್ಟು ಭೀಮಸಿಂಹನನ್ನೂ, ಜಗತ್‌ಸಿಂಹನನ್ನೂ ಸೋಲಿಸಿದನು. ಭೀಮಸಿಂಹನು ಕಿಂಕರ್ತವ್ಯತಾಮೂಢನಾದನು. ಜಗತ್‌ಸಿಂಹ, ಮಾನಸಿಂಹ ಇವರೊಳಗೆ ಕಾಳಗವೆಸಗಿ, ಇಬ್ಬರೂ ಅಂತಃಕಲಹಗಳಿಂದ ಜರ್ಜರಿತರೂ, ಭಗ್ನದರ್ಪರೂ ಆಗಿ, ಸಂದಿದಂತಾಗಿದ್ದರು. ಆದರೆ, ರಜಪೂತಸ್ಥಾನದಲ್ಲಿ ಹೋಳೀಹುಣ್ಣಿಮೆಯನ್ನು ಸಾಂಗವಾಗಿ ಮಾಡಬೇಕೆಂದು ಸಂಕಲ್ಪಮಾಡಿಕೊಂಡ ವಿಧಿ ಇದೇ ಕಾಲಕ್ಕೆ ಅಮೀರಖಾನನೆಂಬ ಒಂದು ಕೊಳ್ಳಿಯನ್ನು ಅಲ್ಲಿಗೆ ಕಳಿಸಿಕೊಟ್ಟನು.

ಅಮೀರಖಾನನನ್ನು ಕಂಡು ರಜಪೂತರು ವೀರ್ಯಹೀನರಾದರು. ಕೃಷ್ಣಾಕುಮಾರಿ ಸತ್ತ ಹೊರತು ಗತಿ ಇಲ್ಲವೆಂದು ಅವರಿಗೆ ಮನದಟ್ಟಾಯಿತು. ಹೆಂಗಸರನ್ನು ಕೊಲ್ಲುವ ಗಂಡಸರಾರೂ ಕತ್ತಿಯನ್ನೆತ್ತಿ ಮುಂದುವರಿಯದ್ದರಿಂದ, ವಿಷಕ್ಕೆ ಈ ಕಾರ್ಯ ಮಾಡ ಬೇಕಾಯಿತು. ವಿಷದಂಥ ವಿಷ ಕೂಡ ಮೂರು ಸಲ ಹಿಂಜರಿಯಿತು. ನಾಲ್ಕನೆಯ ಸಲ ನಿರುಪಾಯವಾಗಿ ಅದು ಅವಳನ್ನು ಕಾಳನಿದ್ರೆಗೈಯುವಂತೆ ಮಾಡಿತು.

1. ಕೃಷ್ಣಾಕುಮಾರಿ ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸಿದ ಅಮಾವಾಸ್ಯೆಯ ರಾತ್ರಿ, 2. ವಿಷದ ಮೊದಲನೆ ಬಟ್ಟಲವನ್ನು ಎತ್ತುವಾಗ ಕೃಷ್ಣಾಕುಮಾರಿಯ ತಮೋವಿಕಾರದ ಅಭಿವ್ಯಕ್ತಿ, 3. ವಿಷದ ಎರಡನೆಯ ಬಟ್ಟಲವನ್ನು ಎತ್ತುವಾಗ ಕೃಷ್ಣಾಕುಮಾರಿಯ ರಾಜ ಸಾಂತಃಕರಣದ ಅಭಿವ್ಯಕ್ತಿ, 4. ವಿಷದ ಮೂರನೆಯ ಬಟ್ಟಲವನ್ನು ಎತ್ತುವಾಗ ಕೃಷ್ಣಾಕುಮಾರಿಯ ಸಾತ್ವಿಕ ಪ್ರವೃತ್ತಿಯ ಅಭಿವ್ಯಕ್ತಿ, 5. ವಿಷದ ನಾಲ್ಕನೆಯ ಬಟ್ಟಲವನ್ನು ಎತ್ತಿದಾಗ ಕೃಷ್ಣಾಕುಮಾರಿಯ ನಿಃಸ್ತ್ರೀಗುಣ ಭಾವಗಳ ಅಭಿವ್ಯಕ್ತಿ, 6. ಕೃಷ್ಣಾಕುಮಾರಿಯ ತಾಯಿಯ ವಿಲಾಪ, 7. ಬುದ್ಧಿಪ್ರಧಾನನಾದ ತಂದೆ–ಭೀಮಸಿಂಹನ ವಿಲಾಪ, 8. ಸತ್ತ್ವಪ್ರವೃತ್ತಿಯ ಜಗತ್‌ಸಿಂಹನ ವಿಲಾಪ, 9. ರಜೋವಿಶಿಷ್ಟನಾದ ಮಾನಸಿಂಹನ ವಿಲಾಪ, 10. ತಮೋಗುಣಿಯಾದ ಅಮೀರಖಾನನ ಹೊಗಳಿಕೆ – ಎಂದು ಮೊದಲಾಗಿ ಈ ಕಥನಕಾವ್ಯದಲ್ಲಿ ಹತ್ತು ವಿಭಾಗಗಳಿವೆ. ಹನ್ನೊಂದನೆಯ ವಿಭಾಗದಲ್ಲಿ ಕವಿಯು 'ಪ್ರೇಮಲತೆ! ಮೂರ್ತಿಮಾನ್ ಪ್ರೇಮಲತೆಯೇ ನಿನ್ನ ಕಾಮಲತೆಯೆಂದು ಕಾವಿಸಿದೌ! ನಿನ್ನನ್ನು ಹೋಮಿಸಿದೌ ಕುಸುಮ ಸುಕುಮಾರ ಕುಮಾರಿಯೇ ಕಾಮಾಗ್ನಿ ಹೋತ್ರದಲ್ಲಿ' ಎಂದು ಮೊದಲಾಗಿ ವಿಲಾಪಿಸಿ ವಿರಮಿಸುತ್ತಾನೆ.

ಇದು ಅತಿ ಚಿಕ್ಕ ಕಥನ ಕವನವಾದರೂ ಇದರ ಹಿನ್ನೆಲೆಯಲ್ಲಿ ಆಳವಾದ ವೈಚಾರಿಕತೆ ಇರುವುದನ್ನು ಕಂಡುಕೊಳ್ಳಬಹುದು.

ಹುದುಗಲಾರದ ದುಃಖ (ಪು. 75) : ಜೀವಂತ ವಿರಹದ ಇನ್ನೊಂದು ಪ್ರೇಮಗೀತ. ಪತ್ನಿಯ ನಿಜವಾದ ನಗೆ ಮತ್ತು ಸುಳ್ಳುನಗೆಯನ್ನು ಅರಿತ ಪತಿಯ ಜಾಣ.

ನಗೀನವಿಲು (ಪು. 76) : ಜೀವನದೊಳಗಿನ ಜೀವಂತ ವಿರಹದ ಒಂದು ಪ್ರೇಮಗೀತ. ವಿರಹಿ – ಕೋಕಿಲ; ಉಲ್ಲಾಸಿ–ನವಿಲು. ನಗು ಜೀವನದ ಉಸಿರು.

ಬಿಸಿಲುಗುದುರೆ (ಪು. 78) : ಮದುವೆಯ ಮೊದಲಿದ್ದ ನಗೆ, ಬಾಳುವೆಯ ಉದ್ದಕ್ಕೂ ಕಂಡವರೆಷ್ಟು ಜನ? ಆ ಬಿಸಿಲುಗುದುರೆಂಬ ದಾರುಣ ಅನುಭವವನ್ನು ಪಡೆದ

ತರುಣನು ಹಾಡಿಕೊಳ್ಳಬಹುದಾದ ಹಾಡು. ಮುದುಗಲಾರದ ದುಃಖ, ನನ ಕೈಯ ಹಿಡಿದಾಕೆ ಮತ್ತು ನಗೀನವಿಲು ಒಂದೇ ಜಾತಿಯ ಪದ್ಯಗಳು.

ರಾಧೆಯ ಪಾಡು (ಪು. 80) ಮತ್ತು ಮನೆಗೆ ಹೋಗವ್ವಾ (ಪು. 82) : ಈ ಎರಡೂ ಪದ್ಯಗಳು ಬೇಂದ್ರೆಯವರ ಅಲಿಖಿತ ನಾಟಕಕ್ಕೆ ಸಂಬಂಧಿಸಿದವುಗಳು. ಕಲ್ಯಾಣದ ಕಲ್ಯಾಣಿಯು ಮುದ್ದಯ್ಯನೆಂಬ ಜಂಗಮನಿಗೆ ಮನಸೋತು ಅವನನ್ನು ಬೆಂಬತ್ತಿ ಬರಲು ಅಪ್ಪಣೆ ಕೇಳಿದಾಗ, (ಮನೆಗೆ ಹೋಗವ್ವಾ) ಎಂದು ಅವನು ಹೇಳಿದನು.

ರಾಧೆಯ ಪಾಡಿನಲ್ಲಿಯ 'ಕರಣ ಕಳವಳಿಸಿವೆ, ಹರಣ ತಳಮಳಿಸಿವೆ ಒಂದೇನೇ, ಸ್ಥಿತಿ ಒಂದೇನ?' ಎನ್ನುವ ರೀತಿ ಶುದ್ಧಪ್ರೀತಿಯದು.

ಹುಬ್ಬಳ್ಳಿ ಯಾಂವಾ (ಪು. 84) : ಪ್ರಣಯಭಂಗದಿಂದ ಹುಚ್ಚು ಹಿಡಿದ ಸೂಳೆಯೊಬ್ಬಳು ತನ್ನ ಉನ್ಮಾದದಲ್ಲಿ ಈ ಹಾಡನ್ನು ಹೇಳುತ್ತಾಳೆ ಎಂದು ಬೇಂದ್ರೆಯವರ ಅಲಿಖಿತ ನಾಟಕದೊಳಗಿನ ಒಂದು ಸಂದರ್ಭ. ಹುಚ್ಚಿಯ ವ್ಯಥೆಯನ್ನು ವರ್ಣಿಸುವಲ್ಲಿ ಈ ಕವನದ ವಿಸ್ತಾರ, ವಿಲಾಸ, ಇದೆ.

ಮರೆಯುವಿಯೋ, ಅರಿಯುವಿಯೋ ! (ಪು. 86) : ಮರೆಯುವಿಯೋ, ಅರಿಯುವಿಯೋ ಮತ್ತು ಎಲ್ಲಿರುವೆ ರಾಜಗಂಭೀರಾ! ಎಂಬ ಎರಡೂ ಹಾಡುಗಳೂ ಬೇಂದ್ರೆಯವರ 'ಸತಿ' ಎಂಬ ಅರ್ಧಮರ್ಧಲಿಖಿತ ನಾಟಕದಲ್ಲಿ ಬರುವಂಥವು. ಪಾಟಲೀಪುತ್ರದ ರಾಜನೊಬ್ಬ ಮುನ್ನೂರು ಹೆಣ್ಣುವೆಯಾಗಿ, ವೈಶಾಲಿಯ ವಿರಕ್ತ ಶ್ರೇಷ್ಠಿ – ಧ್ಯಾನಗುಪ್ತನ ಹೆಂಡತಿ–ಸತಿಯನ್ನು ಅರಮನೆಗೆ ಆಮಂತ್ರಿಸುತ್ತಾನೆ. ಅರಮನೆಯ ಸೆರೆಮನೆಯಲ್ಲಿ ಇದ್ದ ಆ ಮುನ್ನೂರು ಹೆಂಗಳೆಯರ ರಾತ್ರಿಗೀತ ಮತ್ತು ಉದಯಗೀತಗಳಾಗಿ ಮೇಲಿನ ಹಾಡುಗಳು ಬರುತ್ತವೆ.

ಮುಗ್ಧೆ (ಪು. 88) : ಮುಗ್ಧ ಸ್ತ್ರೀಯ ಜೀವನ ಕಂಡು ಅನುಕಂಪದಿಂದ ಹಾಡಿದ ಕವನ ಇದು. ಸೂರ್ಯನ ಉದಯ, ಅಸ್ತ ಮತ್ತು ರಾತ್ರಿ ಸ್ತ್ರೀಯ ಸ್ಥಿತಿ ಹೇಗಿರುತ್ತದೋ: ಅದಕ್ಕೂ ಸೂರ್ಯಪಾನದ ಹೂವಿನ ಸ್ಥಿತಿಗೂ ಇಲ್ಲಿ ಸಾಮ್ಯವನ್ನು ಕಾಣಲಾಗಿದೆ. ಮೂಕ ಶೋಕದ ರೀತಿಯನ್ನು ಚಿತ್ರಿಸಿದೆ.

ಛಾಯಾ (ಪು. 89) : ಕೆಲವು ಸಂಸ್ಕೃತ ಸುಭಾಷಿತಗಳ ಛಾಯಾನುವಾದ. ವಿರಹೋದ್ಗಾರ ಲಹರಿಗಳು, ಪ್ರಿಯಜನರು 'ಜೀವದೊಡನಾಡಿ, ಎದೆಯ ಒಳನಾಡಿ ಪ್ರಾಣ'ದಂತೆ ಇರುತ್ತಾರೆ. ಆದುದರಿಂದ ವಿರಹವೇದನೆ ತೀಕ್ಷ್ಣವಾಗುತ್ತದೆ.

## ಭಾಗ ಮೂರು: ಕೌಟುಂಬಿಕ ಭಾವಗೀತಗಳು

ನನ ಕೈಯ ಹಿಡಿದಾಕೆ (ಪು. 93) : ನಿರಾಶೆಯನ್ನು ಸೀಳಿ ಆಸೆಯತ್ತ ಹೊರಳಿದ ಬಾಳ ಬಳ್ಳಿಯ ಆಲಂಬನದ ಮರ್ಮ ಇಲ್ಲಿದೆ. 'ಬಡ ನೂರು ವರುಷಾನ ಹರುಷಾದಿ ಕಳಿಯೋಣ' ಎಂಬ ಆಶಾವಾದ ಇಲ್ಲಿದೆ.

ಚಿರಂತನ (ಪು. 94) : ಗಂಡು-ಹೆಣ್ಣಿನ ಎಳೆತ, ಸೆಳೆತದಲ್ಲಿ ಹುದುಗಿದ ಸಂತತಿಯ ಚಿಂತನದ ತತ್ತ್ವ ಇಲ್ಲಿದೆ. 'ದೀಪ ಹತ್ತಿ, ಬೆಳಗುತಿಹುದು ಸ್ನೇಹವಾ, ತುಂಬಿ ಬೇರೆ ದೇಹವಾ' ಎಂಬ ಭಾವ ಪ್ರತಿಯೊಂದು ಮನೆಯ ಮಕ್ಕಳ ಬಗ್ಗೆ ಪತಿ-ಪತ್ನಿಯರಲ್ಲಿ ಮೂಡಿದರೆ, ಅದು ಅವರ ಜೀವನಕ್ಕೆ ಮಾರ್ಗದರ್ಶಕ ತತ್ತ್ವವಾದೀತು.

ನಲ್ಲನಲ್ಲೆಯರ ಲಲ್ಲೆ (ಪು. 96) : ಪರಸ್ಪರ ಪ್ರಶಂಸಕ ಹಾಡು. ಚಾತುರ್ಯದ ಚಾಣ್ನುಡಿಗಳ ಮಾಲೆ.

ತಾಯಿ-ಕೂಸು (ಪು. 99) : ತಾಯಿಯ ಮೈಯು ಕೆಲಸದಲ್ಲಿ ತೊಡಗಿದಾಗಲೂ ಜೀವ ಕೂಸಿನಲ್ಲಿರುತ್ತದೆ. 'ಒಡಲೆರಡು ಜೀವ ಒಂದು' ಎಂಬ ಈ ಕರಣಮಧುರ ಅನುಭವವನ್ನು ತಾಯಿಯಂತೆ ಕಂಡವರಾರು?

ನಾನೊಂದು ನೆನೆದರೆ (ಪು. 100) : ವಿರಸನಾದ ಸರಸಿಯೊಬ್ಬ ಸರಸದಲ್ಲಿ ವಿರಸಗೊಳಿಸಿದ ಪ್ರಣಯಿನಿಯನ್ನು ಕುರಿತು ಹೇಳಿದ ನಾಟ್ಯಗೀತ.

ನೀ ಹೀಂಗ ನೋಡಬ್ಯಾಡ ನನ್ನ (ಪು. 101) : ಅಪತ್ಯಗಳನ್ನು ಕಳೆದುಕೊಂಡ ಸತಿಯೊಬ್ಬಳು ಆಸನ್ನಮರಣ ಶಿಶುವನ್ನು ನೋಡಲು ಬಂದ ಪತಿಯನ್ನು ಕುರಿತು, ಅನಿರ್ವಚನೀಯ ದುಃಖದಿಂದ ಅರ್ಥಪೂರ್ಣವಾಗಿ ನೋಡಿದಾಗ, ಅವನ ಎದೆಯಲ್ಲಿ ಹುಟ್ಟಿದ ಹಾಡು ಇದು.

ದೀಪ (ಪು. 102) : ಫಾಲ್ಗುಣ ಪೂರ್ಣಿಮೆಯ ಸುಮಾರು ಗಂಗಾ ಓಘದಲ್ಲಿ ದೀಪವನ್ನು ತೇಲಿಬಿಟ್ಟು, ಅದು ತೇಲುವುದೋ ಮುಣುಗುವುದೋ ಎಂದು ಆಸೆಯಿಂದ ನಿರೀಕ್ಷಿಸುವ ದಂಪತಿಗಳಿಗೆ; ಸಂಸಾರಪ್ರವಾಹದಲ್ಲಿ ಪ್ರೇಮದೀಪದ ಗತಿಯೂ ಹೀಗೆಯೇ ಎಂದು ಒಮ್ಮೊಮ್ಮೆ ಹೊಳೆಯುವುದುಂಟು. ಬೇಂದ್ರೆಯವರು ಕಾಶೀಯಾತ್ರೆಗೆ ಹೋದಾಗ ಬರೆದ ಪದ್ಯ.

ಮನದನ್ನೆ (ಪು. 103) : ಪತಿಗೆ ದೇಹಾದಿಯಾಗಿ ಸರ್ವಾರ್ಪಣ ಮಾಡಿದ ಸತಿ, ಸತಿಯಲ್ಲಿ ಮನಃಪೂರ್ವಕವಾಗಿ ಆಸಕ್ತನಾದ ಪತಿ ಇವರ ಭಾವಸಂಶುದ್ಧಿಯಾಗದೆ ಪ್ರೇಮದ ಜಗತ್ತು ಪ್ರಕಟವಾಗುವುದಿಲ್ಲ. ಅಲ್ಲಿಯವರೆಗಾಗುವ ಸಂಸಾರಸಂಗ್ರಾಮಗಳು ಕುರುಕ್ಷೇತ್ರ ಕ್ಕಿಂತಲೂ ದುರಂತ. ಸಂವಾದಕ್ಕಿಂತಲೂ ವಾದದ ಹಾದಿಯನ್ನು ಹಿಡಿದ ದಂಪತಿಗಳ ಗತಿಯಂತೂ ಹೇಳತೀರದು. ಸಮಗ್ರ ಸಾಮರಸ್ಯ ಇಲ್ಲಿ ಹುಟ್ಟದಿದ್ದರೆ ಇನ್ನು ಎಲ್ಲಿ ಹುಟ್ಟಬೇಕು?

ಹೆಣದ ಹಿಂದೆ (ಪು. 107) : ಅನಾಥಳಾದೊಡನೆ ಅಗತಿಕಳಾಗಿ ಕೂಗುವ ಒಂದು ಹೆಣ್ಣುಧ್ವನಿ ನಿನದಿಸುವವರೆಗೂ ಭೂಮಿಯಲ್ಲಿ ಶಾಂತಿಗೆ ಸ್ಥೈರ್ಯವಿಲ್ಲ. ದೇಶದೇಶಗಳ ಪಾರತಂತ್ರ್ಯಕ್ಕೂ ಹೆಣ್ಣಿನ ಅಗತಿಕತೆಗೂ ಸ್ವಾತಂತ್ರ್ಯ ಸಂಗ್ರಾಮಗಳಿಗೂ ನಿಕಟಸಂಬಂಧ ವಿದೆ. ತಾಯಿಯೇ ಶಾಂತಿಯುಗದ ಪ್ರಥಮ ಮನು.

ತಡಸಲು (ಪು. 112) : ಜಲಪಾತದ ರಮ್ಯವಾದ ದೃಶ್ಯವನ್ನು ಕಂಡು ಕವಿ ಹಾಡಿದ ಕಲ್ಪನಾಗೀತ. ಭೋರ್ಗರೆವ ನೀರು ಕವಿಗೆ ಮುತ್ತಿನ ಸರಗಳ, ಗಾಜುಗುಂಬಗಳ, ಕಾಮನಬಿಲ್ಲಿನ ನೆನಪನ್ನು ತಂದುಕೊಡುತ್ತದೆ.

ಜೀವದ ಗೆಳತಿ (ಪು. 113) : ಪತ್ನಿಪತಿಯರ ಜೀವದ ಗೆಳೆತನದ ಪರೀಕ್ಷೆ ಅವರು ಸುಖವನ್ನು ಹೇಗೆ ತೂಗಿಸಿಕೊಳ್ಳುತ್ತಾರೆ ಮತ್ತು ದುಃಖವನ್ನು ಹೇಗೆ ನೂಕುತ್ತಾರೆ ಎಂಬುದ ರಲ್ಲಿ ಅಡಗಿದೆ ಎಂದು ಇಲ್ಲಿ ಸೂಚಿಸಲಾಗಿದೆ.

ಮುದ್ದು (ಪು. 114) : ಮಗನ ಬಾಲಲೀಲೆಯನ್ನು ಕಂಡು ತಾಯಿ ಅನುಭವಿಸುವ ನವನವೋನ್ಮೇಷದ ಅಭಿವ್ಯಕ್ತಿ ಈ ಕವನದಲ್ಲಿದೆ.

ತಾಯಿಯು ತನ್ನ ಮಗನ ಭವಿಷ್ಯವನ್ನು ಕಲ್ಪಿಸಿ, ಕಲ್ಪನಾಲೋಕದಲ್ಲಿಯೆ ಅವನನ್ನು ಆಶೀರ್ವದಿಸುವ ಬಗೆ ಇದು.

ನಗೆ (ಪು. 116) : ಮಗುವಿನ ಸೂಸಲನಗೆ, ಅರಳುನಗೆ, ಮುಗುಳುನಗೆ, ಹುಚ್ಚು ನಗೆ, ಅಟ್ಟಹಾಸ ಮತ್ತು ಅಸ್ತವನ್ನು ಅರಿಯದ ಬೆಳ್ಳಿನಗೆಯ ವಿಲಾಸ ಮತ್ತು ವೈವಿಧ್ಯ ವನ್ನು ಇಲ್ಲಿ ವರ್ಣಿಸಿದ್ದಾರೆ.

ಘಜಾರಗಟ್ಟೀ ಮುಟ್ಯೋಣು ಬಾ (ಪು. 117) : ಘಜಾರಗಟ್ಟೀ ಎಂಬುದು ಪುಂಡರೀಕ – ಮಹಾಶ್ವೇತೆ, ರಂಭೆ – ತುಂಬುರು ಇವರ ಸಂಬಂಧಗಳಂತೆ, ಜೀವ-ಪುರುಷ ಸಂಬಂಧ ವ್ಯಂಜಿತವಾದಾಗ ಬರೆದದ್ದು.

ಬರುವದೇನೆ ನೆಪ್ಪಿಗೆ (ಪು. 118): 'ಸಖೀಗೀತ'ಕ್ಕೆ ಪ್ರಸ್ತಾವನೆಯಾಗಬಹುದಾದ ಕವನ. ದಾಂಪತ್ಯದ ಸಾಮರಸ್ಯ ಸೂಚಕ ಪದ್ಯ.

ಮಂಗಳಾ (ಪು. 121): ಬೇಂದ್ರೆಯವರು ತಮ್ಮ ಮಗಳು ಮಂಗಲೆಯನ್ನು ಕುರಿತು ಬರೆದ ಪದ್ಯ. ಮಕ್ಕಳ ನಗುಮೊಗವನ್ನೆ, ಸುಖವನ್ನೆ ಬಯಸುವ ತಂದೆಯ ಭಾವದ ಸಾಮಾನ್ಯೀಕರಣವಾಗಿದೆ.

ಸಂಜೀಯ ಜಾವಿಗೆ (ಪು. 122): ಇದೂ ಮಗಳನ್ನೆ ಕುರಿತು ಬರೆದ ಕಲ್ಪನಾರಮ್ಯ ಪದ್ಯ. ಮಗಳ ಜೀವನದ ವಿಷಯವಾಗಿ ಚಿಂತಿಸುತ್ತ, ಅವಳನ್ನು ಕುಣಿಸುತ್ತ ತಂದೆ ಕನವರಿಸುತ್ತಾನೆ.

ಸಖೀ ನಮ್ಮ ಸಖ್ಯದ ಆಖ್ಯಾನ (ಪು. 124): ಕವಿಯ ವಯಸ್ಸು ಎಪ್ಪತ್ತು, ಕವಿಪತ್ನಿಯ ವಯಸ್ಸು ಅರವತ್ತು. ಕವಿ ಈ ಕವನವನ್ನು ರಚಿಸುವಾಗ, ಕವಿಪತ್ನಿ ಪ್ರಜ್ಞೆ ಇಲ್ಲದ ಅವಸ್ಥೆ (ಕೋಮಾ)ಯಲ್ಲಿದ್ದಾಳೆ. ಕವಿ ತನ್ನ ಪತ್ನಿಯ ಸೇವೆಯಲ್ಲಿ ನಿರತನಾಗಿ, ವಿಪ್ರಲಂಭ ಬಾವದಿಂದ ಬರೆದ ಕವನ ಇದು. ಪತ್ನಿಗೆ ಪ್ರಜ್ಞೆ ಬಂದೀತೆ, ಅವಳು ಕಿನ್ನರಿಯಾಗಿ ತಾನು ಕಿನ್ನರನಾಗಿ ಸುಸ್ವರವಾದ ವಾದನಕ್ರಿಯೆ ನಡೆಯಬಹುದೆ ಎಂಬ ಶಂಕೆ, ಭಯ, ಆಶೆ ಮುಪ್ಪರಿಗೊಂಡಿದೆ. 'ಸಖಿ ಏಳು, ಬಂತೇಳು ಅಧಿಕ ತೀರುತ್ತಲೆ, ತಾಯಿ ಕಳಿಸಿರುವಂಥ ನವ ಶ್ರಾವಣಾ/ಶಿವಮಾಸ ಹರಿವಾಸ, ಅರವಿಂದರ ಧ್ಯಾಸ (15-8-1966 ಶ್ರೀ ಅರವಿಂದರ ದರ್ಶನದ ನೆನಪಾಗುತ್ತದೆ ಕವಿಗೆ) ಅವರಾ ಭಜನೆಗೆ ಇದು ಭಾಜನಾ' ಎಂದು ಕವಿಯು ಪತ್ನಿಯ ಮನಸ್ಸನ್ನು ಒಲಿಸುತ್ತಿದ್ದಾನೆ. ಕವಿಗೆ ತನ್ನ ಪತ್ನಿ ಎಂದರೆ ಒಂದು ವೀಣೆ ಎಂಬ ಬಾವ ಅನೇಕ ಸಲ ಬರುತ್ತದೆ.

ತಾನಾದಳೋ ತಾಯೀ (ಪು. 127): ಕವಿಯ ತಾಯಿ, ತಾನು ಸಾಯುವಾಗ ಕವಿ ಬೇಂದ್ರೆಯವರನ್ನು ಲಕ್ಷ್ಮೀಬಾಯಿ ಬೇಂದ್ರೆಯವರಿಗೆ ಒಪ್ಪಿಸಿದಳು. ಈಗ ಲಕ್ಷ್ಮೀಬಾಯಿ, ತಾಯಿಯ ಸ್ಥಳಕ್ಕೆ ಹೋಗಿ ಸುಖಿಯಾದಳು ಎಂದು ಕವಿಜೀವ ಸ್ಮರಿಸುತ್ತದೆ. ವಿರಹಗೀತದ ಛಾಯೆ ಇಲ್ಲಿದೆ.

ಹೋಽದ ಬುಧವಾರಾ ಬರಽಽಽಽಲೊಲ್ಲದು (ಪು. 129): ಪತ್ನಿ ಇದ್ದಳು ಮತ್ತು ಪತ್ನಿ ಸತ್ತಳು ಎಂಬ ಎರಡು ಅನುಭೂತಿಗಳ ತುಲನಾತ್ಮಕ ಬಾವಮಂಥನದ ಗೀತ.

ಅಮವಾಸಿ ದಾಟಿತ್ತು (ಪು. 131): 16-8-1966 ರಾತ್ರಿಯವರೆಗೆ ಅಮವಾಸಿ ಇತ್ತು. ಅದು ದಾಟಿತ್ತು. ಸಂಪ್ರದಾಯದಂತೆ ಉತ್ತಮ ಕಾಲ ಪ್ರಾರಂಭವಾದಂತೆ,

ಕವಿಯ ಸಂಖ್ಯಾದೃಷ್ಟಿಗೆ 17 ಎಂದರೆ ಜೀವನ ಕಳೆ. 16 – ಅಮವಾಸಿ ಮುಗಿಯಿತು 17 – ಜೀವನಕಲೆ ಬಂದಿತು. ಆದುದರಿಂದ ಪತ್ನಿಯ ಪ್ರಕೃತಿ ಇನ್ನು ಸುಧಾರಿಸಬಹುದು ಎಂದು ಕವಿ ಚಿಂತಿಸುತ್ತಿರುವಾಗಲೆ ಪತ್ನಿಗೆ ಮರಣ ಸಂಭವಿಸುತ್ತದೆ. ಮಂಗಲ ಸಮಯದ ಮರಣ ಚಿಂತನೆಯ ಭಾವಗೀತ.

ಮತ್ತೆ ಬಂತು ಶ್ರಾವಣಾ (ಪು. 133) : ಪತ್ನಿಯ ಮರಣದ ಅನಂತರ ಎರಡು ವರ್ಷ ಕಳೆದುಹೋಗಿವೆ. ಮೂರನೆಯ ವರ್ಷ ಶ್ರಾವಣದ ಸೆನಪಾದಾಗ ಕವಿಗೆ ಬ್ರಹ್ಮರಂಧ್ರದಿಂದ, ಬೆನ್ನುಹುರಿಯಗುಂಟ, ಮೂಲಾಧಾರ ಚಕ್ರದವರೆಗೂ ಸಾತ್ವಿಕ ಕಂಪನಾನುಭೂತಿಯಾಗುತ್ತದೆ. ಆಗ ಪತ್ನಿಯ ಚಿಂತೆ ಅಡಗಿ, ಮಗಳ ಭವಿಷ್ಯದ ಸ ರಣೆಯಲ್ಲಿ (ಮಂಗಲ ಮುಖ ದೂರದಲ್ಲಿ) ಕವಿಯು ಶಮಸ್ಥಿತಿಗೆ ಬಂದುದರ ಅಂತರಂಗದ ಕವನ.

## ಭಾಗ ನಾಲ್ಕು : 'ಸಖೀಗೀತ'ದಿಂದ (ಪು. 137)

ಕವಿಯ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖದುಃಖದ ಹಂಬನ್ನು ಹಬ್ಬಬಿಡಲಾಗಿದೆ. ಕಾಮನು ಅನಾದಿಕಾಲದಿಂದ ಅನಂಗನಾಗಿರುವುದರಿಂದ ರತಿಯ ವಿಲಾಪಾಶ್ರುಗಳಿಂದಲೇ ಪ್ರೇಮವಲ್ಲರಿಯ) ಕಮರಬೇಕು. ಇಲ್ಲವೆ ದೈವಕೃಪೆಯಿಂದ ಚಿಗುರಬೇಕು ಅಥವಾ ಪತಿಯೊಲವಿಗೆ ಪಣ ತೊಟ್ಟ ಸತಿಯ ಪ್ರಣಯ ಸಾಹಸವೆಲ್ಲ ತಪದ ವೈರಾಗ್ಯ ವಿಲಾಸವಾಗಿ–ಬೂದಿಯೊಳಗಿಂದಲೆ ಅಡಗಿದ ಬೆಂಕಿಯೆದ್ದಂತೆ – ಕೊನೆಗೆ ಏಳಬೇಕು ಎಂಬ ಚಿಂತನವು ಪತಿ-ಪತ್ನಿ ಸಖ್ಯಸಾಧನೆಯ ಹಿನ್ನೆಲೆಯಾಗಿದೆ.

## ಭಾಗ ಐದು : 'ಕನ್ನಡ ಮೇಘದೂತ'ದಿಂದ (ಪು. 159)
### (ಪೀಠಿಕಾ ಭಾಗ ಮತ್ತು ಇತರ ಆಯ್ದ ಪದ್ಯಗಳು)

ಅಂಬಿಕಾತನಯದತ್ತರ 'ಕನ್ನಡ ಮೇಘದೂತ'ದಲ್ಲಿ ಮಹಾಕವಿ ಕಾಳಿದಾಸನ 'ಸಂಸ್ಕೃತ ಮೇಘದೂತ'ದ 115 ಶ್ಲೋಕಗಳ ಅನುವಾದದ ಜೊತೆಗೆ 14 ನುಡಿಗಳ 'ಪೀಠಿಕೆ' ಮತ್ತು 2 ನುಡಿಯ 'ಕೃತಜ್ಞತೆ' ಇದೆ.

ಪೀಠಿಕೆಯಲ್ಲಿ 1. ಅನಾದಿ ಕಾಮದ ಕ್ರಮ; 2. ಜೀವಲೋಕದಲ್ಲಿ ಕಾಮ; 3. ಭೂಮಿಯ ಕಾಮ; 4. ಯಕ್ಷ–ಯಕ್ಷಿ; 5. ಯಕ್ಷನ ಮೇಘ; 6. ಕವಿಯ ಮೇಘ; 7. ಕವಿ ಕಾಳಿದಾಸ; 8. ಮಂದಾಕ್ರಾಂತ ಛಂದಸ್ಸು; 9. ಬೇರೆ ದೂತ ಕಾವ್ಯಗಳು; 10. ಕನ್ನಡ ಮೇಘದೂತವು ಭಾಷಾಂತರವಲ್ಲ. ಭಾವಗ್ರಹಣ – ಎಂಬ ಹತ್ತು ವಿಭಾಗಗಳನ್ನು ಅಂಬಿಕಾತನಯದತ್ತರು ಮಾಡಿದ್ದಾರೆ.

ದೇವಲೋಕದ ಕಾಮವು ಜೀವಲೋಕದ ಕಾಮವಾಗುವಾಗ ಮೂರು ಪ್ರಕಾರಗಳನ್ನು ಪಡೆಯುತ್ತದೆ. ಮೋಹ, ಊಹೆ ಮತ್ತು ಭಕ್ತಿಯೋಗ ಎಂಬವು ಮೂರು ಪ್ರಕಾರಗಳು. ಜೀವಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಇವರ ಚಿಂತನೆಯೆ ಮಹಾಕವಿ ಕಾಳಿದಾಸನ 'ಸಂಸ್ಕೃತ ಮೇಘದೂತ' ಎಂದು ಅಂಬಿಕಾತನಯರು ಕಂಡುಕೊಂಡಿದ್ದಾರೆ. 'ಸುಕವಿ-ರಸ-ದಾಸಿಯಾಗಿ' ದುಡಿಯಲು ಕಾಳಿದಾಸನ ಭಾವಗ್ರಹಣ ಮಾಡಲು ಬೇಂದ್ರೆಯವರು ಸಂಸ್ಕೃತ ಮೇಘದೂತವನ್ನು ಅನುವಾದಿಸಿದ್ದಾರೆ.

## ಭಾಗ ಆರು : ಗಂಡಸು_ಹೆಂಗಸಿಗೆ

ಗಂಡಸು-ಹೆಂಗುಸಿಗೆ (ಪು. 167) : ಸೌಂದರ್ಯ ಚತುರ್ಮುಖದ ಕೀಲ ಈ ಕವನಕ್ಕಿದೆ. ಗಂಡು-ಹೆಣ್ಣಿನ ಪರಸ್ಪರ ಸ್ನೇಹಸಂಬಂಧದ ಅನಂತತೆಯನ್ನು 'ಸನ್ನಿನೇಕಾರಿತಿಯು ಮುಗಿಯದಿಹ ಬಟ್ಟೆಯನ್ನನವರತ ನೇಯುತಿಹಳು' ಎಂಬಲ್ಲಿ ಸೂಚಿಸಿದ್ದಾರೆ. ತಾಯಿ, ಅಕ್ಕ, ತಂಗಿ, ಮಗಳು, ಕಾಂತೆ, ಧೀರೂಪ, ಶ್ರೀರೂಪ, ಜಗಜ್ಜನನಿ ಮೊದಲಾದ ಸ್ತ್ರೀಯ ವಿವಿಧ ರೂಪಗಳ ಮಹತಿಯನ್ನು ಕವಿಗಳು ಬಣ್ಣಿಸಿದ್ದಾರೆ.

ಚಿಗರಿಗಂಗಳ ಚೆಲುವಿ (ಪು. 16 ) : ಪಕ್ಷಿ-ಪಶು-ಮಾನವ ಎಲ್ಲರನ್ನೂ ಜೀವವೆಂದು ಬಗೆಯದೆ ಜಡಾನ್ನವನ್ನಾಗಿ ಮಾಡಿ ಹಿಂಸೆಗೊಳಿಸುವ ಯುಗಯುಗದ ಗೋಳನ್ನು 'ಚಿಗರಿಗಂಗಳ ಚೆಲುವೆ'-ಭೂಮಿತಾಯಿ ಕೂಡ 'ಒಡವೆ ಅಲ್ಲ ಮಗನೆ! ನಾನೂ ಉಸಿರಿದ್ದೊಡಲು'-ಪೃಥ್ವಿಯು ಜೀವಕೋಟಿಯ ತಾಯಿ, ಅದನ್ನು ಹಿಗ್ಗಾ-ಮುಗ್ಗಾ ಎಳೆದು, ಹರಿದು ಹಂಚಬಾರದು-ಎಂದು ಹೇಳುತ್ತಾಳೆ.

ಗೃಹಿಣಿ (ಪು. 171) : ನಿಸರ್ಗದಲ್ಲಿಯ ನವೋನವ ಚೈತನ್ಯವನ್ನು ಗೃಹಿಣಿಯ ರೂಪದಿಂದ ವಿವರಿಸಲಾಗಿದೆ.

ಮುತ್ತೈದೆ (ಪು. 172) : ಒಬ್ಬ ತಪಸ್ವಿನಿಯ ಮಂಗಲಮಯ ಜೀವನದ ಮುಕ್ತಾಯ. ಮುತ್ತೈದೆತನದ ಸಾವಿನ ಮಹತಿ ಈ ಕವನದ ಹಿನ್ನೆಲೆಯಲ್ಲಿ ಇದೆ.

ಕಥೆಯಾದಳು ಹುಡುಗಿ (ಪು. 172) : ಕಣ್ಣೆದಿರಲ್ಲೇ ಹಸುಗೂಸಿನಂತೆ ಬೆಳೆದು ಕ್ರಮೇಣ ದೊಡ್ಡವರಾಗಿ ಹಡೆದು ತಾಯಾಗಿ, ಮಡಿದು ಹೋಗುವ ಮಡದಿ ಜೀವಗಳ ನೆನಪಾದಾಗ ಕವಿಜೀವ ತಲ್ಲಣಿಸುವುದು. ಅಂಥ ಜೀವಗಳಿಗೆ ಕವಿ ಸಲ್ಲಿಸಿದ ತರ್ಪಣ ಈ ಕವನ.

## ಭಾಗ ಏಳು : ಸೌಂದರ್ಯಾನುಭವದ ಸಾಂಕೇತಿಕ ಅನುಭಾವ ಗೀತಗಳು

'–ಗೆ' (177) : ಒಂದು ಕನಸನ್ನು ಕುರಿತು ಬರೆದ ಪದ್ಯ. ಕಾಮ ಮತ್ತು ಪ್ರೇಮ ಬೇರೆ ಬೇರೆ. ಕಾಮುಕನ ಕಣ್ಣಿಗೆ ಪ್ರೇಮದ ಮೂರ್ತಿ ಸ್ಪಷ್ಟವಾಗಿ ಕಾಣುವುದಿಲ್ಲ. ರಮಣೀಯತೆಯನ್ನು ಕಂಡಾಗ ದ್ರಷ್ಟಾರನು ಕಾಮಿಯಾಗಿ ಉಳಿಯಲಾರ.

ಓ ನಾರಾಯಣಾ ! (ಪು. 178) : ಜೀವಾತ್ಮ ರಾಧಾ, ಆಕಳು ಇದ್ದಂತೆ. ಪರಮಾತ್ಮ ಶ್ರೀಕೃಷ್ಣ, ಕೊಳಲು ಇದ್ದಂತೆ. ಆಕಳು ಕೊಳಲಿಗೆ ಮನಸೋತು ಮೂಕ ಆಗುವಂತೆ, ಜೀವಾತ್ಮವು ನಾರಾಯಣ ಸ್ಮರಣೆಯಲ್ಲಿ ಮಾಸತಿಯಾಗಲು ಬಯಸುತ್ತದೆ.

–ಗೆ (1) (ಪು. 181) : ನಲಿವನ್ನು ಕೊಡುವ ತೋಟದಲ್ಲಿ ಸತ್ಯವನ್ನು ಮಾತ್ರ ಅರಿಯುವ ಹಸು, ಹಕ್ಕಿಯಾಗುವ ಆಸೆ ಇಲ್ಲಿಯ ಜೀವಕ್ಕೆ ಇದೆ.

–ಗೆ (2) (ಪು. 182) : ಬೇಟ, ಬೆಡಗುಗಳ ಆಟ-ಮಾಟ ಮತ್ತು ಆಮಿಷಗಳಿಗೆ ಬಲಿಯಾಗದಂತೆ ಕಾಪಾಡು ತಾಯೆ ಎಂಬ ಪ್ರಾರ್ಥನೆ ಇಲ್ಲಿದೆ.

–ಗೆ (3) (ಪು. 183) : ಇಂದ್ರಿಯಗಳ ನಿಗ್ರಹವನ್ನು ಸಾಧಿಸಿ ಇಂದ್ರನಾಗಬೇಕು ಎಂಬ ಹಂಬಲ ಈ ಕವನದಲ್ಲಿ.

–ಗೆ (4) (ಪು. 185) ಆತ್ಮವನ್ನು ಶಿಗರಿಯಂತೆ ತಿರುಗಿಸಿ ಜೀವಾತ್ಮಕ್ಕೆ ಒಂದು ರೂಪವನ್ನು ಕೊಡು ತಾಯೆ ಎಂಬ ಪ್ರಾರ್ಥನಾ ಪದ್ಯ.

–ಗೆ (5) (ಪು. 187) : ಮನಸ್ಸು ಚಂಚಲವಾಗಬಾರದು, ಜೀವನದಲ್ಲಿ ನಿಷ್ಠೆ ಬರಬೇಕು ಎಂಬ ಅಭೀಪ್ಸೆ ಈ ಕವನದಲ್ಲಿದೆ.

–ಗೆ (6) (ಪು. 189) : 'ಹೆಣ್ಣು ಇದ್ದಲ್ಲೆಲ್ಲ ಪೆಂಪು ಇರುವುದು' ಎಂಬ ದೃಷ್ಟಿ ಬರಲಿ ಎಂಬ ಕರೆ ಇಲ್ಲಿದೆ.

## ಭಾಗ ಎಂಟು : ಸ್ನೇಹಗೀತಗಳು

ಶಾಂತ ಕವಿಗಳ ವಿಶ್ರಾಂತಿ (ಪು. 193) ; ದಿ. ಸಕ್ಕರಿ ಬಾಳಾಚಾರ್ಯರು ಕವಿ

ಗಳಿರುವಂತೆ ಕೀರ್ತನಕಾರರೂ ಆಗಿದ್ದರು. 'ರಕ್ಷಿಸು ಕರ್ನಾಟಕದೇವಿ' ಎಂಬ ಅವರ ಪದ್ಯ ಕೇಳಿದವರಿಗೆ ಅವರ ಕನ್ನಡ ಭಕ್ತಿ ತಿಳಿದಿದೆ. ಅವರು ದಿವಂಗತರಾದಾಗ ಅರ್ಪಿಸಿದ ಶ್ರದ್ಧಾಂಜಲಿಯ ಪದ್ಯ ಇದು.

ಚಿನ್ನ (ಪು. 194) : ಮಧುರಚೆನ್ನರಿಗೂ ಬೇಂದ್ರೆಯವರಿಗೂ ಇರುವ ಒಳಜೀವದ ಸಂಬಂಧವನ್ನು ಕುರಿತು ಬರೆದ ಕವನ. ಈ ಭಾವಗೀತಕ್ಕೆ ಬೇಂದ್ರೆಯವರು ಕಂಡ ಕನಸು ಆಧಾರ. ಇಬ್ಬರ ಜೀವನಕ್ಕೂ ಮಹಾಪ್ರೇರಣೆಯಾಗಿ ನಿಂತ ಶಕ್ತಿ ಒಂದೇ. ಆದರೆ ಇಬ್ಬರ ದೃಷ್ಟಿ ಎರಡು ದಿಕ್ಕಿನಲ್ಲಿ ಹರಿಯುತ್ತಿವೆ ಎಂದು ಬೇಂದ್ರೆಯವರ ಅನಿಸಿಕೆ.

ಕವಿಶಿಷ್ಯ (ಪು. 195) : ಒಂದೆರಡು ಕವನ ಬರೆದೊಡನೆ, ಸರಸ್ವತಿ ತಮಗೆ ಒಲಿದು ಬಿಟ್ಟಿದ್ದಾಳೆ ಎಂಬ ಅಹಮಹಮಿಕೆಯನ್ನು ತಾಳುವವರು ಕೆಲವರಿರುತ್ತಾರೆ. ಕವಿ ಎಂದರೆ ಒಬ್ಬ ಶಿಷ್ಯ ಎಂಬ ಮನೋಭಾವನೆಯನ್ನು ಪಂಜೆ ಮಂಗೇಶರಾಯರು ತೋರಿಸಿಕೊಟ್ಟರು. ಆದುದರಿಂದ ಕವಿಶಿಷ್ಯ ಎಂಬುದು ಪಂಜೆ ಅವರ ಅನ್ವರ್ಥನಾಮ.

ಚಿದಂಬರ (ಪು. 196) : ಬೇಂದ್ರೆಯವರು ಮಾಡಿಕೊಂಡ ಎಳೆಯ ಗೆಳೆಯರಲ್ಲಿ ಮೊಟ್ಟಮೊದಲಿಗ–ಚಿದಂಬರ ಸಗರ. ಆದರೆ ಆ ಗೆಳೆಯನಿಗೆ ಎಳೆತನದಲ್ಲಿ ಅಪಮೃತ್ಯು ಸಂಭವಿಸಿದ್ದರಿಂದ 'ಕಲ್ಲನಿಕ್ಕಿದೆ ಅಡಿಗೆ, ಗುಡಿಗೆ ಗತಿ ಇಲ್ಲ' ಎಂದು ಬೇಂದ್ರೆಯವರು ನೊಂದು ನುಡಿದಿದ್ದಾರೆ.

ಪಂಪಾಯಾತ್ರೆ ಮತ್ತು ವಿ.ಸೀ. (ಪು. 197) : ಹಾಳುಹಂಪೆಯ ಬಗ್ಗೆ ಏನು ಮಾತಾಡುವುದು ? ಮಾತಿಗಿಂತ ಮೌನವೆ ಲೇಸು ಎಂದು ತೋರಬಹುದು. ಆದರೆ ವಿ.ಸೀ.ಯವರು ಮೌನವನ್ನು ಮಾತಾಡಲು ಹಚ್ಚಿದ ಬಗೆ ಅವರ 'ಪಂಪಾಯಾತ್ರೆ'ಯಲ್ಲಿ ಕಾಣಬಹುದು ಎಂದು ಕವಿಗೆ ಎನಿಸಿದೆ.

ತಂಗಿ ಜಾನಕಮ್ಮ (ಪು. 198) : ಜಾನಕಮ್ಮ ದಿವಂಗತರಾದ ಸುದ್ದಿ ಕೇಳಿ ಬರೆದ ಶ್ರದ್ಧಾಂಜಲಿಯ ಕವನ. ಇಲ್ಲಿ ಸಹೃದಯ ಸಾಹಿತಿಗಳ ಹೃದಯಸಂವಾದದ ರೀತಿಯನ್ನು ಕಾಣಬಹುದು.

ಸಂಭಾವನೆ (ಪು. 200) : ಕನ್ನಡದ ಕಣ್ವರೆನಿಸಿಕೊಂಡ ಶ್ರೀಕಂಠಯ್ಯನವರ ಸಂಭಾವನೆಯ ಕಾಲಕ್ಕೆ ಬರೆದದ್ದು, ಕನ್ನಡದ ಶ್ರೀಕಂಠಪಾಣಿಯಾಗಿ ಅವರು ಮಾಡಿದ ಮಹತ್ ಕಾರ್ಯವನ್ನು ಇಲ್ಲಿ ವಿವರಿಸಲಾಗಿದೆ.

ಜಯ ಜಯಾ ಗಾಂಧಿ ಮೋಹನಾ (ಪು. 201) : ಮಹಾತ್ಮಾಗಾಂಧಿಯವರಿಗೆ ಶ್ರದ್ಧಾಂಜಲಿ, ಗಾಂಧಿಯವರ ನಗೆ, ಮಾತು, ಕಾರ್ಯ, ನಿಷ್ಪಾಪಹೃದಯ ಮತ್ತು ರಾಮನಾಮದ ಪ್ರೇಮ ಮೊದಲಾದವುಗಳ ಸ್ಮರಣೆ ಇಲ್ಲಿದೆ.

ನಲ್ ತಾಯಿ (ಪು. 205) : ತಾಯಿ ತೀರಿಕೊಂಡ ಮೇಲೆ ಬೇಂದ್ರೆಯವರು ಅನುತಾಪದಿಂದ ಬರೆದ ಕವನ. ಕೆಲವು ವಸ್ತುಗಳನ್ನು ಕಳೆದುಕೊಂಡ ಮೇಲೆ ಅದರ ಬೆಲೆ ತಿಳಿಯುತ್ತದಂತೆ. ಅಂಥ ವಸ್ತುಗಳಲ್ಲಿ ತಾಯಿ ಎಂಬುದು ಒಂದು ಅಮೌಲ್ಯ ವಸ್ತು.

ರಾಮರಾಮಾ ! (ಪು. 206) ; ಗೆಳೆಯ ವಿನೀತ ರಾಮಚಂದ್ರರಾಯರ ಕರೆಗೆ ಓಗೊಟ್ಟು ಅವರಿಗಾಗಿ ಬೇಂದ್ರೆಯವರು ಬರೆದ ಪ್ರಾರ್ಥನಾ ಪದ್ಯ. ಮಡಿ ಮತ್ತು ಮೈಲಿಗೆ ಎಂಬ ಭಾವನೆಗಳ ಚಿಂತನೆ ಇಲ್ಲಿದೆ.

ಹರಕೆ (ಪು. 210) : ದಿ. ಗೆಳೆಯ ಮಧುರಚೆನ್ನರೊಡನೆ ಬೇಂದ್ರೆಯವರಿಗಿದ್ದ ಗೆಳೆತನದ ಪ್ರೇಮೋನ್ಮಾದದಲ್ಲಿ ಬರೆದ ಪದ್ಯ ಇದು. ಈ ಗೆಳೆಯರಿಬ್ಬರ ಜೀವನ ಧ್ಯೇಯಗಳ ಸಾಕ್ಷಿಚಿತ್ರ ಈ ಕವನದಲ್ಲಿ ಮೂಡಿದೆ.

ಶ್ರೀ ಅರವಿಂದರಿಗೆ (ಪು. 214) : 'ಶ್ರೀ ಅರವಿಂದ ಭಾವಚಿತ್ರದ ದರ್ಶನದಿಂದ ಉದ್ದೀಪ್ತವಾದ ಚಿತ್ರ ಮತ್ತು ಭಾವ'. ಶ್ರೀ ಅರವಿಂದರ ಭಾವಚಿತ್ರದಿಂದ ಪ್ರೇರಣೆಯನ್ನು ಪಡೆಯುವ ಪ್ರಾರ್ಥನಾ ಪದ್ಯ ಇದು.

ಶ್ರೀಮಾತೃಶ್ರೀಗೆ (ಪು. 215) : ಪಾಂಡಿಚೇರಿಯ ಮಹಾಮಾತೆಯವರ ದೃಷ್ಟಿ ದರ್ಶನದಿಂದ ಬೇಂದ್ರೆಯವರಲ್ಲಿ ಒಡಮೂಡಿದ ಭಾವದ ಗೀತ ಇದು.

ಗೆಳೆಯ ಶಂಕರಗೌಡರಿಗೆ (ಪು. 2‌16) : ಗೆ. ಶಂಕರಗೌಡ ಪಾಟೀಲ ಅವರು ಪಾಂಡಿಚೇರಿಯಲ್ಲಿ ದೇಹವಿಟ್ಟರು. ಅವರ ಮತ್ತು ಬೇಂದ್ರೆಯವರ ಸ್ನೇಹಬಂಧಕ್ಕೆ ಪಾಂಡಿಚೇರಿಯೆ ಸೇತುವೆಯಾಗಿತ್ತು. ಬೇಂದ್ರೆಯವರು ಪಾಂಡಿಚೇರಿಗೆ ಹೋಗಿಬರಲು ಅನುಕೂಲವಾಗುವಂತೆ ಮಾಡಿಕೊಟ್ಟವರು ಶಂಕರಗೌಡರು. ಈ ಎಲ್ಲ ಸ್ನೇಹಭಾವದಿಂದ ಉದ್ದೀಪ್ತವಾದ ವಿರಹಗೀತ ಇದು.

ಮೌನವಾರ (ಪು. 218) : ಧಾರವಾಡದ ಸಂವಾದಚತುರ ಮಿತ್ರರೆಲ್ಲ ಕೂಡಿ ಮೌನವ್ರತವನ್ನು ಆಚರಿಸುತ್ತಿದ್ದಾಗ ಬರೆದ ಪದ್ಯ ಇದು.

ತಂಗಿ ಗೌರಮ್ಮ (ಪು. 221) : ಗೌರಮ್ಮ ಎಂಬ ಹೆಸರಿನ ಹಿಂದೆ ಅಡಗಿದ ಶಕ್ತಿಯ ಚಿಂತನೆ ಈ ಕವನದಲ್ಲಿದೆ. ತಂಗಿ ಗೌರಮ್ಮನವರ ಅಕಾಲಮರಣದ ಸುದ್ದಿಯನ್ನು ಕೇಳಿ ಕವಿ ಜೀವ ಕಂಪಿಸಿದೆ, ಗೌರಮ್ಮ–ಗೌರವರ್ಣ–ಗೌರಸ್ಮಿತ-ಗೌರಿಮ ಎಲ್ಲವೂ ಶುಭ್ರ, ಧವಲ. ತಂಗಿ ಗೌರಮ್ಮ ಧವಲಕೀರ್ತಿಯ ಒಬ್ಬ ಕವಯಿತ್ರಿ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತ ವಾಗಿದೆ.

ಇವರು ಆಲೂರರವರು ! (ಪು. 222) : ಕಲಾವಿದ ಎಸ್.ಎನ್. ಸ್ವಾಮಿ ಬರೆದ ಆಲೂರರವರ ಚಿತ್ರವನ್ನು ಕಣ್ಣೆದುರು ಇರಿಸಿ ಬರೆದ ಕವನ.

ಮನಸೂರ ಮಲ್ಲಿಕಾರ್ಜುನರ ಹಾಡು ಕೇಳಿ (ಪು. 223) : ಮನಸೂರರ ಒಂದು ಸಂಗೀತ ಕಛೇರಿ ಕೇಳಿ ಮೂಡಿದ ಭಾವಗೀತ ಇದು.

ಗೆಳೆಯನಿಗೆ ಹರಕೆ (ಪು. 224) ; ಗೆಳೆಯ ಸಿದ್ದವನಹಳ್ಳಿ ಕೃಷ್ಣಶರ್ಮರು ತುಂಗಭದ್ರಾ ಆಶ್ರಮಕ್ಕೆ ಹೊರಟಾಗ ಅವರ ಹುಟ್ಟುಹಬ್ಬದ ದಿನಕ್ಕಾಗಿ ಬರೆದ ಪದ್ಯ.

ಎಂದೂ ಅಗಲದ ಗೆಳೆಯನಿಗೆ (ಪು. 227) : ಮಧುರಚೆನ್ನ ಮತ್ತು ಬೇಂದ್ರೆ ಇವರ ಗೆಳೆತನದ ಪ್ರಥಮ ಪ್ರಾಯದಲ್ಲಿ ಬರೆದ ಕವನ ಇದು.

ರವೀಂದ್ರರಿಗೆ (ಪು. 228) : ರವೀಂದ್ರರ ಶಾಂತಿನಿಕೇತನದಲ್ಲಿ ಚಿತ್ರ, ಸಂಗೀತ, ನೃತ್ಯ ಮೊದಲಾದ ಕಲೆಗಳ ಅಭ್ಯಾಸ ಮಾಡಿಸಲಾಗುತ್ತಿತ್ತು. ಭಾರತಕ್ಕೆ ಈ ಕಲಾಭ್ಯಾಸ ಹೊಸದಲ್ಲ. ಏಕೆಂದರೆ ಭರತಮುನಿ ಭಾರತದವನು. ಜೀವನವೆಂಬ ನಾಟಕವನ್ನು ನಟ ನಾಗಿ, ಪ್ರೇಕ್ಷಕನಾಗಿ, ಸಾಕ್ಷಿಯಾಗಿ, ಅಲಿಪ್ತನಾಗಿ ನೋಡಲು ಬರಬೇಕು. ಇದರ ಅಭ್ಯಾಸ ರವೀಂದ್ರರು ಶಿಷ್ಯರಿಗೆ ಮಾಡಿಸಿದರು. ಅವರಲ್ಲಿಯ ಪ್ರತಿಭೆ ಸದಾ+ಉದಿತ =ಸದೋ ದಿತವಾಗಿ ಇರುತ್ತಿತ್ತು ಎಂದು ಇಲ್ಲಿ ವಿವರಿಸಲಾಗಿದೆ.

ತಮ್ಮ ನೆನೆವ ! (ಪು. 229) : ದಿ. ಗೋವಿಂದ ಪೈ ಅವರಿಗೆ ಅರ್ಪಿಸಿದ ಶ್ರದ್ಧಾಂಜಲಿ. ಗೋವಿಂದ ಪೈ ಅವರ ಪಾಂಡಿತ್ಯ, ಸಂಶೋಧಕ ದೃಷ್ಟಿ ಮತ್ತು ಜ್ಞಾನ ಜಿಜ್ಞಾಸೆಯನ್ನು ಇಲ್ಲಿ ಸ್ಮರಿಸಲಾಗಿದೆ.

ದೇವುಡು (ಪು. 230) : ದೇವುಡು ಮತ್ತು ಬೇಂದ್ರೆಯವರಿಗಿದ್ದ ಹಾರ್ದಿಕ ಬಾಂಧವ್ಯದ ಗೀತ ಇದು.

ನಾನು ಕಂಡಂತೆ (ಪು. 231) : ವಿನಾಯಕ ಕೃಷ್ಣ ಗೋಕಾಕ ಅವರನ್ನು ಕುರಿತು ಬರೆದ ಮೈತ್ರಿಯ ಗೀತ. ಸಹಜೀವನ ಮತ್ತು ಮೈತ್ರಿ ಮಾಡುವವನು ತನ್ನ ಅರಿವೆಂಬ ಗುರುವೆಂಬ ಮಧ್ಯಬಿಂದುವಿನಿಂದ ಮಾಡಬೇಕು. ಇದರಿಂದ ಸ್ನೇಹವರ್ತುಲದ ಪರಿಘದ ಮೇಲೆ ಬರುವ ಎಲ್ಲ ಮಿತ್ರರೊಂದಿಗೆ ಸಮಾನತೆಯನ್ನು ಕಾಯ್ದುಕೊಂಡು ಹೋಗಲು ಸಾಧ್ಯವಾಗುತ್ತದೆ. ಈ ಸೂಕ್ಷ್ಮವನ್ನು ವಿನಾಯಕರು ಬಲ್ಲರು ಎಂದು ಬೇಂದ್ರೆಯವರಿಗೆ ಕಂಡಿದೆ.

## ಭಾಗ ಒಂಬತ್ತು : ಪ್ರೇಮತತ್ತ್ವದರ್ಶನ

ಪ್ರೀತಿ (ಪು. 235) : ಪ್ರೀತಿ ಎಂಬ ಶಿವಭಾವದ ಚಿದಂಬರದಲ್ಲಿ ಒಮ್ಮೊಮ್ಮೆ ತೋರುವ ರುದ್ರಕಾಳಿಯ ಲಾಸ್ಯ ತಾಂಡವದ ದೃಶ್ಯವು ಅದ್ಭುತ ಭಯಂಕರವಾಗಿರುತ್ತದೆ. ಎಂಬುದು ಈ ಕವನದಲ್ಲಿ ಸೂಚಿಸಿದೆ. ಪ್ರೀತಿ ಮಾಡುವುದು ಮತ್ತು ಮಾಡಿಸಿಕೊಳ್ಳುವುದು ಎರಡೂ ಕಠಿಣಮಾರ್ಗ. ಒಮ್ಮೊಮ್ಮೆ ಪ್ರೀತಿ ಪ್ರೇತವಾಗಿ, ಮಹಾಭೂತವಾಗಿ ಕಂಡರೆ ಆಶ್ಚರ್ಯಪಡಬೇಕಾಗಿಲ್ಲ.

ಕುಣಿಯೋಣು ಬಾರs ! (ಪು. 236) : ಪತಿ ತನ್ನ ಧರ್ಮಪತ್ನಿಯನ್ನು ಕುಣಿತಕ್ಕೆ ಕರೆದ ಆನಂದಗೀತ. ಬಾಳು ಒಂದು ಕುಣಿತ. ತಿಳಿದು ಹಾಕಿದ ಒಂದು ಹೆಜ್ಜೆಯೂ ನೃತ್ಯಪದನ್ಯಾಸವಾಗುತ್ತದೆ.

ಸಂಸಾರ (ಪು. 243) : ಪೌರಾಣಿಕ, ಕಾವ್ಯರಸಿಕ, ವ್ರತಿ, ಕೌಟುಂಬಿಕ ಮತ್ತು ಕನಸಿಗ ಇವರು ಸಂಸಾರವನ್ನು ಕಾಣುವ ರೀತಿ ಹೇಗೆ ಭಿನ್ನ ಭಿನ್ನವಾಗಿರುತ್ತದೆ ಎಂಬುದನ್ನು ವಿವರಿಸಲಾಗಿದೆ. ಸುಖಸಂಸಾರವನ್ನು ರಾತ್ರಿಯು ಕಣ್ಣುಮಿಟುಕಿಸುವುದೆ–ಚಿಕ್ಕೆ ಎಂದು ಇಲ್ಲಿ ಕವಿಕಲ್ಪನೆ. ಇದು ಭವಿಯ ಗೀತ. ದಾಂಪತ್ಯಜೀವನದಲ್ಲಿಯೆ ಕವಿಯು ಸಫಲತೆಯನ್ನು ಕಾಣುತ್ತಾನೆ. ಇದು ಕವಿಯ ಜೀವನದೃಷ್ಟಿ.

ನಾದಲೀಲೆ (ಪು. 245) : ಜೀವನದ ತಾಲ–ಲಯಾನುಸಾರಿತ್ವದಲ್ಲಿ ಒಂದು ನಾದ ತನ್ಮಯತೆ ಇದೆ. ಮರಣದ ಭಯ ಬೇತಾಲಕ್ಕೆ ಎಳೆಯುವುದು. ಜೀವನದ ತನ್ಮಯತೆ ಬೆಳಕು, ಹೂವು, ಹರಿಣ, ಹಸುಗಳ ಜೀವನದಲ್ಲೂ ದಿನವೂ ಕಂಗೊಳಿಸುವುದು.

ಏಳು ಕನ್ನಿಕೆಯರು (ಪು. 246) : ಒಂದು ಕನಸಿನ ಸ್ಮರಣೆ. ದಿಗಂಬರನಾಗಿ ಪರೀಕ್ಷೆ ಕೊಡುವ ಕಾಲ ಎಲ್ಲ ಜೀವಿಗಳಿಗೂ ಬರುವದು. ಆಗ ದೇವಕನ್ನಿಕೆಯರ ಸ್ಪರ್ಶಕ್ಕೆ

ಅಧೋಗತಿಯ ಲಹರಿಗಳಿಳಿದರೆ ಆ ಪರೀಕ್ಷೆಯನ್ನು ಮತ್ತೊಮ್ಮೆ ಕೊಡಬೇಕಾಗುವುದು. ಆದರೆ ಈ ಪರೀಕ್ಷೆ ಜೀವವನ್ನು ಏಳು ಎಂದು ಎಬ್ಬಿಸಲಿಕ್ಕೆ; ಕೆಡಹಲಿಕ್ಕೆ ಅಲ್ಲ.

ಸಚ್ಚಿದಾನಂದ (ಪು. 248); ಅನ್ನ, ಪ್ರಾಣ, ಮನ, ಜ್ಞಾನ, ಕಾಯುಗಳಲ್ಲಿ ಜೀವ ಸತಿಯಂತೆ ತನ್ನ ಪಿಂಡಕಿನಲ್ಲಿಯೂ ಗೌರವ ಕಾಯ್ದುಕೊಂಡು ತನ್ನ ಅಂತರಂಗದ ಶ್ರದ್ಧೆಯ ಉದ್ಗಾರಗಳನ್ನು ಹೇಳುತ್ತಿದೆ. ಸಚ್ಚಿದಾನಂದದ ವಾಣಿಯಾಗಿ ಪತಿರೂಪದಲ್ಲಿ ದಿವ್ಯತೆ ಉತ್ಸಾಹಕವಾಗಿ ನುಡಿಯುತ್ತಿದೆ.

ಅನಂತ ಪ್ರಣಯ (ಪು. 251) : ಸೂರ್ಯನಿಗೂ ಚಂದ್ರನಿಗೂ ನಡೆದಿರುವ ಅನಂತಪ್ರಣಯ ಒಂದು ನಿರಂತರ ರೂಪಕವಾಗಿ ಬಣ್ಣಿಸಲಾಗಿದೆ. ಈ ಸೃಷ್ಟಿಯ ಸಂಕೇತವು ಅಣುಕಣದಲ್ಲಿಯೂ ಅನುಭವ ಗೋಚರವಾಗುವುದು.

ಅಷ್ಟು ಇಷ್ಟು ಇಷ್ಟು ಪ್ರೀತಿ (ಪು. 252) : ಪ್ರೀತಿಯ ಪ್ರತಿಫಲ ಪ್ರೀತಿ ಯಲ್ಲಿಯೇ ಇದೆ. ಈ ಅನಂತಶಕ್ತಿಯ ಅಷ್ಟು ಇಷ್ಟು ಎಂಬ ಸಾಂತ ಜಗತ್ತಿನ ಭೇದಗಳಿಗೆ ಅರ್ಥವಿಲ್ಲ.

ಕರುಳು (ಪು. 254) : ಜೀವನದಲ್ಲಿ ಅನೇಕ ಕಷ್ಟಗಳನ್ನು ಪಡೆಯಲು ಜೀವ ಸಿದ್ಧ ವಿರುತ್ತದೆ. ಆ ಜೀವಕ್ಕೆ ಅಯ್ಯೋ ನೊಂದೆ, ಬಂದೆಯಾ ಬಾ ಕಂದ ದಣಿದೆ' ಎಂದು ಆಮಂತ್ರಿಸುವ ಅಂತಃಕರಣ ಉಳ್ಳವರು ಒಬ್ಬರು ಸಿಕ್ಕರೆ ಸಾಕು. ಆ ಜೀವ ಎಲ್ಲ ಕಷ್ಟ ಗಳನ್ನು ಮರೆತುಬಿಡುತ್ತದೆ. ಕಷ್ಟಗಳ ಬಿರುಬಿಸಿಲಲ್ಲಿ ಕರುಳುಳ್ಳವರು ಆಡಿದ ಒಂದು ಅಂತಃಕರಣದ ಮಾತೆ ತಣ್ಣೀರಿನ ಬುಗ್ಗೆಯಾಗುತ್ತದೆ.

ಸಮಸ್ಯೆ (ಪು. 255) ; 'ಬೆಳಕೆ ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ' ಎಂದು ಕವಿಜೀವ ತನ್ನ ಬಾಲ್ಯದಲ್ಲಿ ತಾಯಿಯನ್ನು ಕೇಳುತಿತ್ತಂತೆ. ಈ ಪ್ರಶ್ನೆ ವೇದಕಾಲದ ಋಷಿ ಗಳಿಗೂ, ಸುಖಸಾಮ್ರಾಜ್ಯ ಸ್ಥಾಪಿಸಬೇಕು ಎಂಬ ರಾಜರಿಗೂ ಮತ್ತು ಒಲುಮೆಗೆ ಆಸೆ ಪಡುವ ಸತಿ-ಪತಿಯರಿಗೂ ಕಾಲಕಾಲಕ್ಕೆ ಬಂದೇ ಬಂದಿದೆ.

ಸಂತತಿ (ಪು. 256) ; ವಿವಾಹದ ಕಾಲಕ್ಕೆ ವರನಿಗೆ ವಧುವನ್ನು ಧಾರೆ ಎರೆದು ಕೊಡುವಾಗ ಹೇಳುವ ಮಂತ್ರ ಇದು. ಕೃತಯುಗದಲ್ಲಿ ಮಂತ್ರವಾಗಿದ್ದದ್ದು ಕಲಿಯುಗದಲ್ಲಿ ತಂತ್ರವಾಗಿ ತನ್ನ ಮಹಿಮೆಯನ್ನು ಕಳೆದುಕೊಳ್ಳುತ್ತದೆ ಎಂಬ ಭಾವ ಇಲ್ಲಿದೆ.

ಸುಖಸ್ಪರ್ಶ (ಪು. 257) : ಪುರುಷ-ಸ್ತ್ರೀ ಸಂಬಂಧಕ್ಕೆ ಸುಖಸ್ಪರ್ಶ ಎಂದು

ಹೆಸರು. ಆದರೆ ಈ ಸುಖಿಸ್ಪರ್ಶ ಅನುಭವಿಸಿದವರು ಯಾರು ಎಂಬುದು ಚಿಂತನೀಯ ವಿಷಯ. ನರಪಿಂಡ ಹುಲ್ಲು ಹೂವಿಗೂ ಕೀಳೆ? ಎಂಬುದು ಇಲ್ಲಿಯ ಪ್ರಶ್ನೆ.

ರಸಿಕಃ ವೇದಾಂತಿಗೆ (ಪು. 258) : ರಸರಸದ ಮೋಹದ ಮುಸುಕು, ನಿತ್ಯರುಚಿ ಯಾನಂದ ತನುವು ಮತ್ತು ಪ್ರೇಮದಿಂದ ಕೂಡಿದ ಜೀವನ ರಸಿಕನಿಗೆ ಸಾಕು ಎಂದು ರಸಿಕ ವೇದಾಂತಿಗೆ ಹೇಳುತ್ತಾನೆ. ದೇಹ, ಜೀವನ ಇವುಗಳನ್ನು ನೋಡುವ ದೃಷ್ಟಿ ರಸಿಕ ಮತ್ತು ವೇದಾಂತಿಗಳಲ್ಲಿ ಭಿನ್ನ ಪರಸ್ಪರ ವಿರುದ್ಧವಿರುತ್ತದೆ ಎಂದು ಭಾವನೆ. ಆದುದರಿಂದ ವೇದಾಂತಿ ರಸಿಕಸಂಸಾರಿಕನನ್ನು ಕಂಡು ನಗೆಯಾಡುವುದು ಉಂಟು.

ಸುಹೃದ (ಪು. 259) : ಹೃದಯವಂತಿಕೆಯುನ್ನು, ಸ್ನೇಹಶಕ್ತಿಯನ್ನು ದಯ ಪಾಲಿಸು ಎಂದು ನಾರಾಯಣನಲ್ಲಿ ಬೇಡಿಕೊಳ್ಳಲಾಗಿದೆ. ಹಿಮಾಲಯದ ಮಾನಸ ಸರೋವರದ ಗಂಗೆಯಂತೆ ಗೆಳೆತನ ಯಾವಾಗಲು ಪವಿತ್ರ, ನಿರ್ಲೇಪ. ಅದು ಕಲಕುಮಲಕು ಆಗುವುದು ಬೇಡ ಎಂದು ಆಶೆ.

ಅಗಮ್ಯ (ಪು. 260) : ಮೋಹ ಎಂಬ ಮಹಾಶಕ್ತಿ ಎಂದಿಗೂ ರಮ್ಯವಾಗಿಯೆ ಇದೆ. ಆಕರ್ಷಕವಾಗಿಯೆ ಇದೆ. ಆದರೆ ಅದು ಹೀಗೇಕೆ ಎಂಬುದು ಮಾತ್ರ ಯಾರಿಗೂ ತಿಳಿಯದಂತಾಗಿದೆ. ಆದುದರಿಂದ ಅದು ಅಗಮ್ಯವಾಗಿದೆ.

ತೊಗಲ ಚೀಲ (ಪು. 261) : ದೇಹ ಎಂಬುದು ಒಂದು ತೊಗಲ ಚೀಲ. ಈ ಚೀಲವನ್ನು ಅನ್ನದಿಂದ ತುಂಬುವುದಕ್ಕಿಂತ ಹಿಗ್ಗಿನಿಂದ ತುಂಬುವುದು ಮೇಲು. ಇದಕ್ಕೆ ಸಾಧನೆ ಬೇಕು.

ಕಾಮೋದೆ (ಪು. 262) : ವಾರುಣಿ, ಜ್ಯೇಷ್ಠೆ ರಮೆ ಮತ್ತು ಕಾಮೋದೆ ಎಂದು ನಾಲ್ವರು ಕನ್ನೆಯರು. ವಾರುಣಿಯ ವಿವಾಹ ದೈತ್ಯರೊಡನೆ ಆದರೆ ಇನ್ನುಳಿದ ಮೂವರೊಡನೆ ವಿಷ್ಣು ವಿವಾಹಮಾಡಿಕೊಳ್ಳುತ್ತಾನೆ. ಕಾಮೋದೆಯೆ ಭೂಲೋಕದ ತುಳಸಿಯಾಗುತ್ತಾಳೆ. ಅನಂತರ ವಿಷ್ಣುವು ಅಮೃತದಲ್ಲಿ ತನ್ನ ರೂಪವನ್ನು ಕಂಡಾಗ ಅಲ್ಲಿಯ ಪ್ರತಿಬಿಂಬವೆ–ಕಾಮೋದೆಯೆ–ಮೋಹಿನಿಯಾಗಿ ಅಸುರಸಂಹಾರ ಮಾಡುತ್ತಾಳೆ. ನಾರಾಯಣನು ನೀರಾದರೆ ಕಾಮೋದೆ ರುಚಿಯಾಗುತ್ತಾಳೆ. ಬೆಂಕಿಗೆ–ಬೆಳಕು, ಹೂವಿಗೆ–ಕಂಪು, ಗಾಳಿಗೆ–ತಂಪು, ಅಸುವಿಗೆ–ಕಸುವು ಆಗುವುದು ಕಾಮೋದೆಯ ಜೀವನ ವಿಕಾಸ. ಇದೊಂದು ಕಥನ ಕವನ.

ಕಲ್ಪವೃಕ್ಷವೃಂದಾವನಂಗಳಲಿ (ಪು. 266) : ಕಲ್ಪವೃಕ್ಷಗಳಿಂದ ಕೂಡಿದ ವೃಂದಾವನದಲ್ಲಿ ಈ ಕಥನ ಕವನದ ನಾಯಕನು ತನ್ನ ಸಹಜ ಸಖಿಯೊಂದಿಗೆ ಸುತ್ತಾಡುವ

ಅನುಭವ ಪಡೆಯುತ್ತಾನೆ. ಸಹಜ ಸಖಿ ಇವನಲ್ಲಿ ಒಂದಾದಾಗ ಎಚ್ಚರಾಗುತ್ತಾನೆ. ಅಸಾಮಾನ್ಯ ಕನಸಿನ ಒಂದು ಅನುಭವ ಗೀತ ಇದು.

ಕೊಳಲನೂದಿದ (ಪು. 269) : ಗೋಪಿ ಮತ್ತು ಗೋಪಾಲರು ಕೃಷ್ಣನ ಕೊಳಲಿನ ನಾದಕ್ಕೆ ಮರುಳಾಗುವ ವೈವಿಧ್ಯವನ್ನು ಇಲ್ಲಿ ಮೂರು ಭಾಗಗಳಲ್ಲಿ ವಿವರಿಸಲಾಗಿದೆ.

ಕೊಡುವದೇನೂ ಕೊಂಬುದೇನು? (ಪು. 274) : ಒಲವು, ಸ್ನೇಹ ಮತ್ತು ಪ್ರೇಮ ಇವು ಅಂತರಂಗದ ವಿಷಯಗಳು. ಇವು ಹೊರಗೆ ಬರಿದೋ ಬರಿದಾಗಿ ಕಂಡರೂ ಒಳಗೆ ಬಲಿಯುವುದು ಇವುಗಳ ಸ್ವಭಾವ. ಇವುಗಳಲ್ಲಿ ಕೊಡುವುದು, ಕೊಂಬುದು ಎಂದು ಎರಡು ಕ್ರಿಯೆಗಳು ಇರುವದಿಲ್ಲ. ಕೊಡುವಾಗಲೆ, ಕೊಬುವ-ಪಡೆಯುವ ಕಾರ್ಯವೂ ನಡೆದುಹೋಗುತ್ತದೆ—ಮುದ್ದು ಕೊಡುವಾಗಲೇ ಅದನ್ನು ತೆಗೆದುಕೊಂಡಂತೆ.

ಜೀವನ-ಕಲ್ಯಾಣ (ಪು. 276) : ನರ-ನಾರಿಯರು ಜೀವನ ಎಂಬುದು ಒಂದು ನಾಟಕ ಎಂಬ ಸಾಕ್ಷಿಭಾವದಿಂದ ಅದನ್ನು ನೋಡುವ ಕಲೆಯನ್ನು ಸಾಧಿಸಿಕೊಳ್ಳಬೇಕಾಗಿದೆ. ಕೋಲು ಹಾಕಿ ಹಾಡಿಕೊಳ್ಳಬಹುದಾದ ಒಂದು ಹಾಡು.

ಜೀವನನಾಟ್ಯ (ಪು. 277) : ಶಕ್ತಿ ಜೀವನದ ದರ್ಶನ ಗೀತ. ತಂದೆ, ತಾಯಿ ಮತ್ತು ಮಗು ಇವರೇ ಜೀವನ ನಾಟ್ಯದ ಪ್ರಧಾನ ಪಾತ್ರಗಳು.

ಪ್ರೇಮಬೀಜ (ಪು. 278) : ಬೀಜಕ್ಕೆ ಎರಡು ಅವಸ್ಥೆ. ಅದು ಮೊದಲು ಮೂಲದಲ್ಲಿದ್ದು ಅನಂತರ ಫಲದ ಗೊನೆಗೂ ಬೀಜವಾಗಿಯೆ ಉಳಿಯುತ್ತದೆ. ಹಾಗೆ ಜೀವನದ ಆದಿಯಿಂದ ಅಂತ್ಯದವರೆಗೂ ಅಖಂಡವಾಗಿ ಇರಬೇಕಾದ ತತ್ತ್ವ ಒಂದೇ. ಅದು ಪ್ರೇಮ. ಮಾನವನ ಐಕ್ಯತೆ ಇದು ಬೇಕೇ ಬೇಕು.

ಒಲವು ಲಿಂಗ (ಪು. 279) : ರತ್ನ ಇದ್ದಿಲಾಗಬಹುದು, ಇದ್ದಿಲು ರತ್ನವಾಗವಾಗಬಹುದು. ಇದು ಅದರದರ ತಪ-ತಾಪವನ್ನು ಅವಲಂಬಿಸಿರುತ್ತದೆ. ಅದರದರ ಒಲವು ಅದರದರ ಲಹರಿ.

ಅಹಲ್ಯೆ (ಪು. 280) : ಅಹಲ್ಯೆ ಸತ್ತ್ವದಲ್ಲಿ ನಲ್ಲೆ. ಗೌತಮನ ತಾಪದಲ್ಲಿ ಕಲ್ಲಾದಳು. ರಾಮಪಾದಸ್ಪರ್ಶದಿಂದ ಮತ್ತೆ ನಲ್ಲೆಯಾದಳು.

ಒಲವಿನ ನಿಲವು (ಪು. 281) : ಒಲವು-ಪ್ರೀತಿಯೆ ಭಕ್ತಿಗೆ ಮೂಲ. ಪ್ರೀತಿ ಎಂಬುದು ಸ್ವಾತಿಯ ಮುತ್ತು. ಯೋಗ್ಯ ನಕ್ಷತ್ರದ ಮಳೆಯ ನೀರಿನ ಹನಿ, ಯೋಗ್ಯ ಸಿಂಪು ಮತ್ತು ಯುಕ್ತ ಕಾಲ ಕೂಡಿ ಬಂದಾಗ ನೀರಹನಿ-ಮುತ್ತಾಗುವಂತೆ; ಪ್ರೀತಿಯು ಭಕ್ತಿ ಎಂಬ

ಶಕ್ತಿಯಾಗುತ್ತದೆ. ಈ ಭಕ್ತಿಗೆ ವಿರಕ್ತಿ ಅವಶ್ಯವಿಲ್ಲ. ಏಕೆಂದರೆ ವಿರಕ್ತಿ–ಒಣವಾಗಿದ್ದು ರಸಹೀನವಾಗಿರುತ್ತದೆ. ಭಕ್ತಿ ಒ ದೇ ರಸೋತ್ಕರ್ಷ.

ಒಲವೆಂಬ ಹೊತ್ತಿಗೆ (ಪು. 282) : ಬೇಂದ್ರೆಯವರ ಒಲವು ವೈದೇಹಿಕ ಮತ್ತು ಆತ್ಮಸಂಬಂಧಿ. ಆದುದರಿಂದ ಅವರ ಸಂಪರ್ಕದಲ್ಲಿ ಬಂದ ಸ್ನೇಹಿತರ ಸಿಹಿ, ಕಹಿಗಳೆಲ್ಲ ಬೇಂದ್ರೆಯವರ ಅಂತರಂಗದ ಆಕಾಶದಲ್ಲಿ ಸ್ಮರಣೆಯ ನಕ್ಷತ್ರಗಳಾಗಿ ಮಿನುಗುತ್ತವೆ. ಒಲವೆಂಬುದು ಒಂದು ಪವಿತ್ರ ಸ್ಮರಣೆ, ಪೂಜ್ಯಗ್ರಂಥ– ಹೊತ್ತಿಗೆ. ವಿವೇಕಹೀನ ಮತ್ತು ಹೃದಯಹೀನ ದೃಷ್ಟಿಕೋನದಿಂದ ಒಲವನ್ನು ವಿಮರ್ಶಿಸುವುದು ಅಮಾನುಷ ಅನ್ಯಾಯ.

ಒಲವು ಎಂಬುದು ಅಭಿಪ್ರಾಯವಲ್ಲ ಅದು ವ್ಯಕ್ತಿಗತ ಆಂತರಿಕ ಅನುಭೂತಿಯ ವಿಷಯ. ಆದುದರಿಂದ ಪ್ರತಿಯೊಬ್ಬನೂ ತನ್ನ ಒಲವಿನ ಸ್ಪರ್ಶದ ಪ್ರತಿಕ್ರಿಯೆಯನ್ನು ತನ್ನ ಹೃದಯಸಂಪುಟದಲ್ಲಿ ಬರೆದಿಡಬೇಕೇ ಹೊರತು ಬಹಿರಂಗವಾಗಿ ಚರ್ಚಿಸಬಾರದು.

# ಬೇಂದ್ರೆಯವರ ಒಲವಿನ ನಿಲವು

"ಓಂಕಾರವು ವೇದಾಂತವಿಚಾರದಲ್ಲಿದ್ದಂತೆ 'ನಲ್' ಎಂಬುದು ಕಾವ್ಯವಿಚಾರದಲ್ಲಿ ಪ್ರಮುಖ. 'ನಲ್' ಎಂಬ ಬೀಜಕ್ಕೆ ಬೇರೆ ಬೇರೆ ಪ್ರತ್ಯಯಗಳು ಸೇರಿ ಅದರ ವಿವಿಧ ಗರ್ಭಿತಾರ್ಥವನ್ನು ಪ್ರಕಟಗೊಳಿಸಿವೆ. ಒಂದೇ ಮಾತ್ರೆಯು ಭಿನ್ನ ಅನುಪಾನಗಳ ಮೂಲಕ ಅನೇಕ ರೋಗಗಳಿಗೆ ಉಪಶಾಮಕವಾಗಬೇಕಾದರೆ, ಮೂಲ ಮಾತ್ರೆಯಲ್ಲಿ ಬೀಜಭೂತ ಗುಣವು ಇರಲೇಬೇಕು. 'ನಲ್' ಬೀಜದಿಂದ ನಲಿವು = ಆನಂದ; ನಲುಮೆ = ಪ್ರೀತಿ; ನಲ್ಲ = ಸುಂದರ ; ನಾಲಗೆ = ರಸಜ್ಞೆಯಾದ ಜಿಹ್ವೆ ; ನಾನ್ = ಆರ್ದ್ರವಾಗು ; ನಲ್ಲೆ ವಾಲು = ಸವಿಯಾದ ಹಾಲು – ಹೀಗೆ ಶಬ್ದ ಸಿದ್ಧಿಯಾಗಿದೆ. ನಲ್‌ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದ ಅಡಕವಾಗಿವೆ. ಕವಿಯ ಪ್ರತಿಭೆಯು ಪ್ರೀತಿಯ ರೀತಿ; ಕಾವ್ಯ ವಿಷಯವಾದ ಜಗತ್ತೆಲ್ಲ ಸೌಂದರ್ಯವು; ಅವುಗಳ ಅರಿವಿನ ಸಂಗಮವು ರಸವು; ಇವು ಮೂರಕ್ಕೂ ಆಧಾರವಾಗಿದ್ದುದು ಸೃಷ್ಟಿ–ಸ್ಥಿತಿ–ಲಯಗಳಿಗೆ ಬ್ರಹ್ಮಭೂತ ಆನಂದ. ಉಪನಿಷತ್ತು, ವೇದಗಳಲ್ಲಿ 'ಮಧು' ಶಬ್ದವನ್ನು ಹೀಗೆಯೇ ಬಳಸಿದುದು ಉಂಟು. ಆದರೆ ಅದಕ್ಕೆ ನಲ್ಲದ ಮೇಲ್ಮೆ ಬರಲಾರದು. ಇದರ ಬಣ್ಣ ಬೇರೆ, ಅದರ ಬಣ್ಣ ಬೇರೆ; ಇದರ ಧ್ವನಿ ಅದಕ್ಕಿಲ್ಲ."1

" 'ನಲ್' ಎಂಬ ಬೀಜಾಕ್ಷರದಲ್ಲಿದೆ ಸಾರಸಂಪತ್ತಿ, ದ್ರಾವಿಡರ ರಸ ವಿಚಾರವು ಎಷ್ಟು ಗಾಢವೂ, ಗೂಢವು ಆಗಿತ್ತೆಂಬುದು ಈ ಒಂದು ಶಬ್ದದಿಂದ ತಿಳಿಯುವಂತಿದೆ. 'ಆನಂದಾತ್ ಖಲ್ವಿಮಾನಿ ಭೂತಾನಿ ಜಾತಾನಿ' ಎಂಬುದನ್ನು ಅವರು ಬಲ್ಲವರಾಗಿದ್ದರು. ರಸ, ರಮಣೀಯತೆ, ಪ್ರೇಮ ಮತ್ತು ಆನಂದ ಎಂಬ ಈ ಚತುರ್ಮುಖಿಗಳನ್ನು 'ಸಾಹಿತ್ಯ

---

1 'ಸಾಹಿತ್ಯ ಮತ್ತು ವಿಮರ್ಶೆ", 2ನೆಯ ಆವೃತ್ತಿ (1949), ಪುಟ 26

ವೇದ'ದಾದಿಯಿಂದ ದ್ರಾವಿಡರು ತಿಳಿಯುತ್ತಿದ್ದರು. ಈ ನಾಲ್ಕು ರೂಪಗಳ ಸಮನ್ವಯಿತ ಏಕರೂಪವಾದ 'ನಲ್' ಎಂಬ ಆದಿಶಕ್ತಿಯ ದರ್ಶನದಿಂದಲೇ ಮಾನವನು ಕವಿಯಾಗುವನು, ಋಷಿಯಾಗುವನು. ಈ ದರ್ಶನಾನುಭವದಿಂದಾಗುವ ಆನಂದವನ್ನು ವಾಚಕರಲ್ಲಿ ಉಂಟುಮಾಡುವಂತೆ ವಾಗರ್ಥಸಂಜ್ಞೆಗಳಿಂದ ವರ್ಣಿತವಾದುದೇ ಕಾವ್ಯವು! ಮಂತ್ರವು! ದರ್ಶನ ವಿಷಯವು ಪಾಮರರಿಗೂ ಕಾಣುವ ಒಂದು ಬಡ ಹೂ ಇರಬಹುದು (ಹೂತ ಹುಣಸಿಮರ ಸಾಕು) ; ಅಥವಾ ಪಂಡಿತರಿಗೂ ಹೊಳೆಯದ ಬಲ್ಲಿದನಾದ ದೇವನಿರಬಹುದು. ಆದರೆ 'ಯೇನ ಸರ್ವಂ ಇದಂ ತತಂ' ಎಂದು ಹೊಗಳಿಸಿಕೊಂಡಿರುವ ಆ ಗೂಢಶಕ್ತಿಯ ಶ್ರೀಮತ್ ಮತ್ತು ಊರ್ಜಿತವಾದ ರೂಪವನ್ನೇ—ವಿಭೂತಿಯನ್ನೇ ವರ್ಣಿಸುವುದು ಕವಿಯ ವಿಷಯವಾಗಿದೆ. ಇದಕ್ಕೆ 'ಕಾವ್ಯಯೋಗ' ಬೇಕು. ಯೋಗವು ಪ್ರತಿಭೆಯ ಜನಕ. ಯೋಗಸ್ಥರಾಗಿ ಹೇಳಿದ ಹಾಡೇ ಅಮರ ಕಾವ್ಯ; ಉಳಿದುದು ರಂಜನೆಯದೊಂದು ವಿಧಿ...ಪ್ರೇಮವನ್ನು ತಿರಸ್ಕರಿಸುವ, ರಮಣೀಯತೆಯನ್ನು ವಿದ್ರೂಪ ಮಾಡುವ, ಆನಂದವನ್ನು ಪ್ರತಿರೋಧಿಸುವ, ಅಸಹ್ಯ ಭಾವಾಭಾಸದ ವಾತಾವರಣವು ಪ್ರಪಂಚವನ್ನು ಮುಸುಕಿ ಉಸುರುಗೆಡಿಸುತ್ತಲಿದೆ. ಈ ಕಾಲಕ್ಕೆ ಸಹಿಷ್ಣುವಾಗಿಯೂ, ಜಯಿಷ್ಣುವಾಗಬಲ್ಲ ರವೀಂದ್ರರು ಬರೆದಂಥ ಸಾಹಿತ್ಯವೂ, ಅರವಿಂದರು ಹೇಳುವಂಥ ದರ್ಶನವೂ, ಜಗದೀಶಚಂದ್ರರು ಪ್ರಕಾಶಗೊಳಿಸುತ್ತಿರುವಂಥ ಶಾಸ್ತ್ರವೂ, ಮೋಹನದಾಸರು ಮಾಡುತ್ತಿರುವ ಧರ್ಮಾಚರಣೆಯೂ ಅಗತ್ಯವಾಗಿವೆ...ಕಾಲಕಾಲಕ್ಕುಂಟಾಗುವ ಧರ್ಮಗ್ಲಾನಿಯನ್ನು ಹೋಗಲಾಡಿಸಲು ಸರಸ್ವತಿಯು ಯೋಗವನ್ನಾಶ್ರಯಿಸಿ ನವಕವಿಗಳ ಮುಖಾಂತರವಾಗಿ ಅಭಿನವ ಸಾಹಿತ್ಯದ ರೂಪದಿಂದ ಅವತರಿಸುವಳು! ಮತ್ತು ಜಗತ್ತಿನ ರಸ, ರಮಣೀಯತೆ, ಪ್ರೇಮ ಮತ್ತು ಆನಂದದ ಕಾವ್ಯಧರ್ಮವನ್ನು ಅಚ್ಯುತವಾಗುವಂತೆ ಪ್ರತಿಷ್ಠೆಗೊಳಿಸುವಳು...ಕವಿತೆಗಳು ಅವರವರ ಜೀವರಾಜನ ಅಂತರಂಗಿಕ ಸಾಧನದ ಬಹಿರಂಗ ಸಂಕೇತಗಳು. ಕವಿ ಸಾಧನೆ ಮಾಡುವುದು ಕಾವ್ಯವನ್ನು ಬರೆಯಬೇಕೆಂದಲ್ಲ; ತಮ್ಮೊಳಗಿನ ಕವಿಯು ತಮಗೆ ಪ್ರಕಟವಾಗಬೇಕೆಂದು."[2] ಬೇಂದ್ರೆ ಕಾವ್ಯದ ಹಿನ್ನೆಲೆ, ತಳಹದಿ, ಭೂಮಿಕೆ ಇದು. ಇದನ್ನು ತಿಳಿದುಕೊಳ್ಳುವುದು ಇವರ ಕಾವ್ಯಾಭ್ಯಾಸಕ್ಕೆ ಪೋಷಕ.

'ಒಲವೆ ನಮ್ಮ ಬದುಕು' ಈ ಕವನಸಂಕನದಲ್ಲಿ ಬೇಂದ್ರೆಯವರ ಉತ್ತರಾಯಣ' 'ಯಕ್ಷ-ಯಕ್ಷಿ ಮತ್ತು 'ಶ್ರೀಮಾತಾ' ಈ ಮೂರು ಸಂಕಲನಗಳನ್ನು ಬಿಟ್ಟು ಇನ್ನುಳಿದ ಇಪ್ಪತ್ತೊಂದು ಕವನಸಂಕಲನಗಳಿಂದ ಆಯ್ದ ಒಂದು ನೂರಾ ಮೂವತ್ತೊಂದು ಕವನಗಳಿವೆ. ಈ ಕವನಗಳನ್ನು ಒಂಬತ್ತು ವಿಭಾಗಗಳಲ್ಲಿ ವಿಭಜಿಸಲಾಗಿದೆ. ಅನುರಾಗ, ವಿರಹ,

---

2 'ಗರಿ', 6ನೆಯ ಆವೃತ್ತಿ (1973), ಪುಟ 148–150.

ಕೌಟುಂಬಿಕ, ಗಂಡಸು–ಹೆಂಗಸು, ಸೌಂದರ್ಯಾನುಭವದ ಸಾಂಕೇತಿಕ ಅನುಭಾವಗೀತ, ಸ್ನೇಹ ಮತ್ತು ಪ್ರೇಮತತ್ತ್ವದರ್ಶನ ಎಂದು ಮೊದಲಾಗಿ ವಿಭಜನೆಯ ನಾಮಕರಣ ಮಾಡಲಾಗಿದೆ.

ಪ್ರೀತಿ, ಪ್ರೇಮ, ಅಕ್ಕರೆ, ಒಲವು, ವಾತ್ಸಲ್ಯ, ಕರುಣೆ, ಭಕ್ತಿ, ಪ್ರಣಯ, ಅನುರಾಗ, ಸ್ನೇಹ, ಗೆಳೆತನ, ಮೊದಲಾದ ಶಬ್ದಗಳಿಗೆ ಕಾಮ ಎಂಬ ಪುರುಷಾರ್ಥವೆ ಮೂಲ. ಕಾಮದಲ್ಲಿ ಸುಕಾಮ, ದುಷ್ಕಾಮ, ದೇವಕಾಮ ಎಂಬ ನೆಲೆಗಳಿರುವಂತೆ ಮೇಲೆ ನಮೂದಿಸಿದ ಒಲವು ವಾಚಕ ಶಬ್ದಗಳಿಗೆ ಇರುವ ವಿವಿಧ ನೆಲೆಗಳು, ಗುಣ–ದೋಷಗಳು ಚಿಂತನೀಯವಾಗಿವೆ.

ತಂದೆತಾಯಿಗಳ ಮೇಲೆ ಮಕ್ಕಳಿಗೆ ಪ್ರೇಮ ಇರುತ್ತದೆ; ಮಕ್ಕಳನ್ನು ತಂದೆತಾಯಿ–ವಾತ್ಸಲ್ಯದಿಂದ, ಮಮತೆಯಿಂದ, ಮೋಹದಿಂದ ಸಾಕಿ ಸಲಹುತ್ತಾರೆ; ಗಂಡ-ಹೆಂಡತಿ ಪರಸ್ಪರರನ್ನು ಪ್ರೀತಿಸುತ್ತಾರೆ; ತವರುಮನೆಯವರು ಮಗಳೊಡನೆ ಅಕ್ಕರೆತೆಯಿಂದ ನಡೆದು ಕೊಳ್ಳುತ್ತಾರೆ; ಗೆಳೆಯರು ಸ್ನೇಹದಿಂದ ವರ್ತಿಸುತ್ತಾರೆ; ದೇವರನ್ನು ಸಾಧಕನು ಭಕ್ತಿಯಿಂದ ಪೂಜಿಸುತ್ತಾನೆ; ದೇವರು ಭಕ್ತನ ಮೇಲೆ ಕರುಣೆ ತೋರಿ ಒಲಿಯುತ್ತಾನೆ. 'ದೇವರ ಒಲ್ಮೆ ಇರುಲುಂ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನ್ ಆಗನೇ?' 'ನಾನು ಬಡವಿ, ಆತ ಬಡವ' 'ಒಲವೆ ನಮ್ಮ ಬದುಕು' ಎಂಬುದು ಬೇಂದ್ರೆಯವರ ಜೀವನದೃಷ್ಟಿ.

ಬೇಂದ್ರೆಯವರಿಗೆ ಪ್ರೀತಿ, ಪ್ರಣಯ, ಪ್ರೇಮ ಮೊದಲಾದ ಶಬ್ದಗಳಿಗಿಂತ ಒಲವು ಎಂಬ ಶಬ್ದ ಹೆಚ್ಚು ಪ್ರಿಯ ಎಂದು ತೋರುತ್ತದೆ. ಒಲೆ, ಒಲೆದಾಡು, ಒಲ್ಮೆ, ಒಲವು ಶಬ್ದಗಳ ಚಿಂತನವನ್ನು ಅವರು ಆಳವಾಗಿ ಮಾಡಿದ್ದಾರೆ.

'ಒಲಿ ಹೊತ್ತಿಸಬೇಕಮ್ಮಾ
ಅಡಗಿ ಮನಿಯೊಳಗ
ಅನ್ನಾ ಎಡಿಮಾಡಬೇಕ
ಅನ್ನ ದಾನೀಶ್ವರಗ
ಘುರು ಘುರು ಅಂತಾಗ
ಉರಿನಾಲಿಗಿಯವನ ಶಿವನ
ತವರು ಮನೆಯವರು ಯಾರು
ಬರತಾರೋ ಕಾಣೆ?

ನಮ್ಮಾವಾs ಹೇಳೋ ತಾಯೀ ತಮ್ಮಾ
ದೇವನ ಆಣೆ.

.......................

ದೇವರ ಮನಿಯಾ ದೀಪಾ
ಬೆಳಗಿಸಬೇಕs
ಮಕ್ಕೊ ಕಳೆದೂ ಎಣ್ಣೀ ಹಣೆಹಣಿಸಿ
ಬತ್ತಿ ತಳಿಸಿ
ಮ್ಯ ಮಣಿಸಿ ಎದಿದುಂಬಿ ಕೈಮುಗುಳು
ನೀಡಿ ಬೇಡಿ ಬೇಡಿ.

ಒಲಿಯೋ ಒಲಿ ಅನ್ನದ ಗಡಗೀಯೊಳಗೂ
ಕೋಡೊಲಿ ಕೆಳಗೂ
ಹೊತ್ತೊತ್ತಿಗೆ ಭಕ್ತಿ
ಯುಕ್ತಿ ಹೊಳಿಸೋ
ಅಡಗಿಯ ಮನಿಯುವವ
ಬಲ್ಲವನs
ರಸರುಚಿಪಾಕಾ
ಎಲ್ಲವನ ಅರಿತವನ
ನಮ್ಮ ಮಾತು ಧಾತೂ
ಹೂತು ಬೆರೆತವನ'3

ಈ ಕವನದಲ್ಲಿ ಒಲವು – ಒಲೆಯಲ್ಲಿ – ಬೆಂಕಿಯಾಗಿ ; ಅನ್ನದಲ್ಲಿ – ರುಚಿಯಾಗಿ ; ಅಗ್ನಿ – ದೇವರಾಗಿ ; ದೇವರ ಮನೆಯ – ದೀಪವಾಗಿ ; ಮಾತಿನ – ಜ್ಯೋತಿಯಾಗಿ ; ಧಾತುವಿನಲ್ಲಿ – ವೀರ್ಯವಾಗಿ ಅಡಗಿ, ಬೆರೆತು ಇರುವುದನ್ನು ವಿವರಿಸಲಾಗಿದೆ. ಪ್ರೀತಿ, ಪ್ರೇಮ, ಪ್ರಣಯ ಮೊದಲಾದವು ಬಹಿರಂಗ ಕ್ರಿಯೆಯಾದರೆ, ಒಲವು ಒಂದೇ ಅಂತರಂಗದ ಸ್ಥಾಯಿ ಭಾವ.

ಒಲವಿಗೆ–ಆಕರ್ಷಣ–ವಿಕರ್ಷಣ, ಧ್ವನಿ, ವಿದ್ಯುತ್ ಮತ್ತು ಪ್ರಕಾಶ ಶಕ್ತಿಗಳಿವೆ. ತರುಣ-ತರುಣಿಯರ ಪ್ರಣಯ, ಪ್ರೇಮಗಳಲ್ಲಿ ಪ್ರಮುಖವಾಗಿ ಆಕರ್ಷಣ-ವಿಕರ್ಷಣ ಶಕ್ತಿ ಕಾರ್ಯ ಮಾಡುತ್ತದೆ. ಇದೇ ಅನುರಾಗ–ವಿರಹ. ಇಲ್ಲಿಯೆ, ಕಲಹ, ಅಸೂಯೆ,

---

3 'ನಾಕು ತಂತಿ' : "ಪಂಚಾರತಿ", 3ನೆಯ ಮುದ್ರಣ (1975), ಪುಟ 62-63.

ಮತ್ಸರ, ದರ್ಪ, ಅಹಂಕಾರ ಮೊದಲಾದ ಸಂಚಾರಿ ಭಾವಗಳ ತಾಕಲಾಟ, ಮಿಾಂಚಾಟ ವಾಗುತ್ತವೆ. ಒಲವಿನ ಧ್ವನಿ ಶಕ್ತಿ – ತಾಯಿ-ತಂದೆ-ಮಕ್ಕಳು. ಇವರಲ್ಲಿ ಮಮತೆ, ಗೌರವ, ಭಕ್ತಿಯಾಗಿ ಕಾರ್ಯಮಾಡುತ್ತದೆ. ಇವರು ಮೂವರೂ ಪರಸ್ಪರರ ಧ್ವನಿ ಯರಿತು ಜೀವನ ಸಾಗಿಸಿದರೇ ಅದು ಸರಸ ಸಂಸಾರ. ಇಲ್ಲಿಯೂ ಕೆಲವು ಸಲ ವಿರಸದ ಹೊಗೆಯಾಡುತ್ತದೆ. ಒಲವಿನ-ವಿದ್ಯುತ್ ಶಕ್ತಿ ನೀತಿ ನಿಯಮಗಳಾಗಿ ಲೈಂಗಿಕ, ವೈಷಯಿಕ ವ್ಯವಹಾರದಲ್ಲಿ ಕಾರ್ಯ ಮಾಡುತ್ತದೆ. ಅಧರ್ಮ ಕಾಲದಲ್ಲಿ ವಿಕೃತಿಯು ಕೈಚಳಕ ನಡೆದು ವಿದ್ಯುತ್ ಆಘಾತದಂತೆ ಫಲಗಳನ್ನು ಅನುಭವಿಸುವ ಪ್ರಸಂಗ ಬರುತ್ತದೆ. ಒಲವಿನ – ಪ್ರಕಾಶ ಶಕ್ತಿಯೆ ಜೀವನದಲ್ಲಿ ತಾರಕಶಕ್ತಿ ಎಂದು ಅಂಬಿಕಾತನಯದತ್ತರ ದರ್ಶನ.

ಜೀವ = ಜೀವನ-ಒಲವು-ದೇವ ಈ ತ್ರಿವೇಣಿ ಸಂಗಮವಾಗುವುದೆ ಬಾಳಿನ ಸಾರ್ಥಕತೆ. ಇವುಗಳಲ್ಲಿ ಹೊಂದಾಣಿಕೆ ಆಗುವುದು ಕಷ್ಟ. ಹೊಂದಾಣಿಕೆ ಆಗುವಂತೆ ಪ್ರಯತ್ನಿಸುವುದೇ ಸಾಧನೆ. ಪತ್ನಿಯನ್ನು-ಸಖಿಯಾಗಿ; ಮಕ್ಕಳನ್ನು–ಅತಿಥಿಯಾಗಿ; ಗೆಳೆಯರನ್ನು–ಸಹೋದರರಾಗಿ; ಗುರುವನ್ನು - ದೈವವಾಗಿ ಕಾಣುವುದು ಒಲವೆಂಬ ಪ್ರಕಾಶ ಸಾಧನೆಯ ಪ್ರಮುಖ ಹೆಜ್ಜೆಗಳು. ಅಂಬಿಕಾತನಯ ದತ್ತರ ಈ ಅಂತರಂಗಿಕ ಸಾಧನೆಯ ಬಹಿರಂಗ ಸಂಕೇತಗಳಾಗಿ ಅವರ ಒಲವಿನ ಗೀತಗಳು ಉದ್ಭವವಾಗಿವೆ.

ಒಲವು ಭಾವಾವೇಶ ಮತ್ತು ಬುದ್ಧಿಪೂರ್ವಕವಾಗಿರಬಾರದು. ಒಲವು ಕೇವಲ ಭಾವಾವೇಶದಿಂದ ಕೂಡಿದ್ದರೆ ಅಲ್ಲಿ ಭಾವೋದ್ರೇಕ ಅಘಾತವಿದೆ. ಇದೇ ರೀತಿ ಒಲವು ಕೇವಲ ಬುದ್ಧಿಪೂರ್ವಕವಾಗಿದ್ದರೆ ಕೆಲವು ಸಲ ದುರ್ಬುದ್ಧಿ ಪ್ರಧಾನವಾಗುವ ಸಂಭವವಿರು ತ್ತದೆ. ಆದುದರಿಂದ ಒಲವು ಯುಕ್ತ ಬುದ್ಧಿ ಮತ್ತು ಯುಕ್ತ ಭಾವನೆಯಿಂದ ಕೂಡಿರಬೇಕು ಎಂಬುದನ್ನು ಬೇಂದ್ರೆಯವರು ತಾರುಣ್ಯದಲ್ಲಿಯೆ ಕಂಡುಕೊಂಡರು. ಈ ಯುಕ್ತತೆಯ ಸ್ಫುರಣ ಒಲವೆಂಬ ಪ್ರಕಾಶ ಕೇಂದ್ರದಿಂದ ಬರುತ್ತದೆ ಎಂದು ಅರಿತ ಬೇಂದ್ರೆಯವರು ಇಂದಿಗೂ ಒಲವು ಪ್ರಕಾಶ ಕೇಂದ್ರದೊಂದಿಗೆ ಯಾವಾಗಲೂ ಸಂಪರ್ಕ ಸಾಧಿಸುವ ಸಾಧನೆ ಯನ್ನು ಮಾಡುತ್ತಿದ್ದಾರೆ ಎಂದು ನನಗೆ ತೋರುತ್ತದೆ. ಒಲವು ಸಾಧನೆಯಿಂದ ನಮ್ಮ ಜೀವನವು ದಿವ್ಯ ಜೀವನವಾಗುತ್ತದೆ ಎಂಬ ಆದರ್ಶದಲ್ಲಿ ಬೇಂದ್ರೆಯವರಿಗೆ ಅಚಲವಾದ ಶ್ರದ್ಧೆ. ಈ ಶ್ರದ್ಧೆಯೆ ದೇವಯಾನ ಪಂಥದ ಪ್ರಥಮ ನಿಲವು.

"ನಾನು ಒಲವಿನಿಂದ ವೇದಾಂತಿ. ಅಭ್ಯಾಸದಿಂದ ಶ್ರೀಮತ್ ಭಗವದ್ಗೀತೆಯ ಉಪಾಸಕ, ವಿಮರ್ಶಕ...ಪ್ರಸಾದಿಯ ಶಿವಲಿಂಗಸ್ಥಲಕ್ಕೂ, ಪ್ರಾಣಲಿಂಗಿಯ ಜಂಗಮಲಿಂಗ ಸ್ಥಲಕ್ಕೂ ಮಧ್ಯೆ ಉದ್ಭವಿಸುವ ಒಲವು ಲಿಂಗವು ನನಗೆ ತಕ್ಕಮಟ್ಟಿನ ವಿರಾಮಸ್ಥಾನವಾಗಿ ಎಂದಿನಿಂದಲೂ ತೋರಿದೆ. ಅದು ಜೀವಾತ್ಮ–ಅಂತರಾತ್ಮ-ಪರಮಾತ್ಮ ವಿವೇಕೋದಯಸ್ಥಲ

ವಾಗಿದೆ. ಸಾಮಾನ್ಯವಾಗಿ ಇದು ಜೈನ, ವೀರಶೈವ ಮತ್ತು ವೈದಿಕ ದರ್ಶನಗಳಿಗೆ ಸಪ್ಯ ಸಂಗಮ ಸ್ಥಲವಾಗಲು ಅಡ್ಡೀ ಇಲ್ಲ ಎಂದು ನನ್ನ ನಂಬಿಗೆ...ಸಮಾಧಿಪ್ರಜ್ಞೆ ಆತ್ಮಲಿಂಗದ ಶೃಂಗ. ಇಲ್ಲಿ ಶುದ್ಧ ಸ್ವತ್ವದ, ಸತ್ವದ, ತತ್ತ್ವದ, ಸತ್ಯದ ಉದಯುವಾಗುವುದು. ಇದೆಲ್ಲ ಒಲವು ಲಿಂಗದ ಆತ್ಮತ್ರಯದ ಶುದ್ಧಿಪರಿಪಾಕವನ್ನು ಅವಲಂಬಿಸಿದೆ. ಒಲವು ಲಿಂಗದ ಕ್ಷೇತ್ರದ ಕ್ಷೇತ್ರಜ್ಞನು ಪೂರ್ವದ ಮೂರು ಸ್ಥಲಗಳಿಗೂ ತದನಂತರದ ಮೂರು ಸ್ಥಲಗಳಿಗೂ ಆತ್ಮತ್ರಯದ ಕಣಿಕೆ–ಕಳಾಸ ಹೊಂದಿಸುವಾಗ, ಮೇಲಿನ ಅವ್ಯಯ ತ್ರಿಚಕ್ರದ ಯೋಗಕ್ಷೇಮವನ್ನು ಕುಶಲತೆಯಿಂದ ನೋಡಿಕೊಳ್ಳುತ್ತಾನೆ...ಜೀವಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಸಾಮರಸ್ಯದ 'ಒಲವು ಲಿಂಗ' ಹದದ, ಮುದದ ಭೂಮಿ."4

ಶೈಶವ ಅವಸ್ಥೆಯ, ತಾರುಣ್ಯದ, ವೃದ್ಧಾಪ್ಯದ, ಸಮಾನ ವಯಸ್ಸಿನ, ಸಮಾನ ಗುಣದ, ಭಿನ್ನಗುಣದ, ನಾಗರಿಕ, ಲೈಂಗಿಕ, ನೈಸರ್ಗಿಕ, ಸ್ವಾರ್ಥಯುಕ್ತ, ಲೋಕ ಹಿತಾರ್ಥದ, ಶಿಷ್ಯವಾತ್ಸಲ್ಯದ, ಸಖ್ಯದ, ನಿಸರ್ಗಾತೀತ, ಮೃದು, ಕಠೋರ ಮೊದಲಾದ ಯಾವುದೇ ಬಗೆಯ ಒಲವಿರಲಿ; ಅಲ್ಲಿ ಜೀವಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಸಾಮರಸ್ಯದ ಚಿಂತನೆ ಪ್ರಮುಖವಾಗಿರುವುದು ಅಂಬಿಕಾತನಯದತ್ತರ ಒಲವಿನ ಗೀತಗಳ ಜಾತಿ. ಮಹಾಕವಿ ಕಾಳಿದಾಸನ 'ಮೇಘದೂತ' ಅಂಬಿಕಾತನಯದತ್ತರ ಒಲವಿಕೆ ಭೂಮಿಕೆಗೆ ವಜ್ರಕವಚ.

–ಸಂ. ವಾ. ದ.



4 'ಸಾಹಿತ್ಯದ ವಿರಾಟ್ ಸ್ವರೂಪ', ಪ್ರಥಮ ಮುದ್ರಣ (1974), ಪುಟ 1003 ಮತ್ತು 1006.

